ಕೊನೆಯ ರಕ್ಷಾಪುಟದಲ್ಲಿ ಕಾಣಿಸಿರುವ ಶಿಲ್ಪಕಲೆಯಲ್ಲಿ ಮೂವರು ಭವಿಷ್ಯವಾದಿಗಳು ಭಗವಾನ್ ಬುದ್ಧನ ತಾಯಿ ರಾಣಿ ಮಯಾಳ ಕನಸನ್ನು ರಾಜ ಶುದ್ಧೋಧನನಿಗೆ ವಿವರಿಸುವ ದೃಶ್ಯವಿದೆ. ಅವುಗಳ ಕೆಳಗೆ ಆ ವಿವರಣೆಯನ್ನು ಬರೆದುಕೊಳ್ಳುತ್ತಿರುವ ಬರಹಗಾರ ಕುಳಿತಿದ್ದಾನೆ. ಬಹುಶಃ ಇದೇ ಭಾರತದ ಬರವಣಿಗೆಯ ಕಲೆಯನ್ನು ಕುರಿತ ಪ್ರಥಮ ಸಚಿತ್ರ ದಾಖಲೆಯಾಗಿದೆ.

ಸ್ಥಳ : ನಾಗಾರ್ಜುನ ಕೊಂಡ – ಕ್ರಿ.ಶ. ಎರಡನೆಯ ಶತಮಾನ.

ಕೃಪೆ : ನ್ಯಾಷನಲ್ ಮ್ಯೂಸಿಯಂ, ನವದೆಹಲಿ.

ಯುರಿಪಿಡೀಸ್ ಮಹಾಕವಿಯ

# ಮೀಡಿಯ

ಕನ್ನಡಿಸಿದವರು

ಕೆ. ಎಸ್. ನರಸಿಂಹಸ್ವಾಮಿ



ಸಾಹಿತ್ಯ ಅಕಾದೆಮಿ

*MEDEA* - Kannada translation by. K.S. Narasimhaswamy of Euripides, *Medea*. Sahitya Akademi, New Delhi, 1996
Price Rs. 20

ISBN - 81 - 260 - 0031 - 7



ಮೊದಲ ಮುದ್ರಣ : 1965
ಎರಡನೆಯ ಮುದ್ರಣ : 1982
ಮೂರನೆಯ ಮುದ್ರಣ : 1996

**ಸಾಹಿತ್ಯ ಅಕಾದೆಮಿ**

ರವೀಂದ್ರಭವನ, ೩೫, ಫಿರೋಜಶಾಹ ರಸ್ತೆ, ನವದೆಹಲಿ - ೧೧೦ ೦೦೧
'ಸ್ವಾತಿ', ಮಂದಿರ್ ಮಾರ್ಗ, ನವದೆಹಲಿ - ೧೧೦ ೦೦೧
೧೦೯, ಎಡಿಎ ರಂಗಮಂದಿರ, ಜೆ.ಸಿ. ರಸ್ತೆ, ಬೆಂಗಳೂರು - ೫೬೦ ೦೦೨.
'ಗುಣ ಬಿಲ್ಡಿಂಗ್ಸ್' ಎರಡನೆಯ ಮಹಡಿ, ೩೦೪ - ೩೦೫, ಅಣ್ಣಾಸಾಲೈ, ತೇನಂಪೇಟೆ, ಮದ್ರಾಸು - ೬೦೦ ೦೧೮
ಜೀವನ್‌ತಾರಾ ಭವನ್, ೨೩ಎ / ೪೪ ಎಕ್ಸ್, ಡೈಮಂಡ್ ಹಾರ್ಬರ್ ರಸ್ತೆ, ಕಲ್ಕತ್ತಾ - ೭೦೦ ೦೫೩
೧೭೨, ಮುಂಬಯಿ ಮರಾಠಿ ಗ್ರಂಥ ಸಂಗ್ರಹಾಲಯ ಮಾರ್ಗ, ದಾದರ್, ಮುಂಬಯಿ - ೪೦೦ ೦೧೪.

ಬೆಲೆ : ಇಪ್ಪತ್ತು ರೂಪಾಯಿ

ಮುದ್ರಕರು: ಟೆಕ್ನೋ ಪ್ರಿಂಟರ್ಸ್, ಬೆಂಗಳೂರು.

# ಗ್ರೀಕ ನಾಟಕ*

**ಬರೆದವರು—ಎಚ್. ಡಿ. ಎಫ್. ಕಿಟ್ಟೊ**

ಗ್ರೀಕ ನಾಟಕ ಅಥೆನ್ಸ ಒಂದೇ ನಗರದ ನಿರ್ಮಿತಿ. ಅಲ್ಲಿ ಮೂರು ಬಗೆಯ ನಾಟಕಗಳು ಪ್ರಚಲಿತವಾಗಿದ್ದವು—ರುದ್ರನಾಟಕ, ಸ್ಯಾತರ್‌ನಾಟಕ (ಈ ಬಗೆಯ ನಾಟಕಗಳು ಈಗ ಹೆಚ್ಚು ಉಪಲಬ್ಧವಿಲ್ಲ) ಹಾಗು ಹರ್ಷನಾಟಕ. ಈ ಮೂರೂ ಬಗೆಗಳಿಗೆ ಸಾಧಾರಣ ಲಕ್ಷಣಗಳು ಇವು—ಮೂರೂ ಜರಗುತ್ತಿದ್ದುದು ಅಥೆನ್ಸದಲ್ಲಿಯೇ; ಡಯೋನಿಸಸ್ ದೇವತೆಯ ವಾರ್ಷಿಕ ಸಮಾರಾಧನೆಯ ವಿಶಿಷ್ಟ ಮಾಸದಲ್ಲಿಯೇ. ಮೂರೂ ಬಗೆಗಳಲ್ಲಿಯೂ ಪಾತ್ರಗಳ ಜೊತೆಗೆ ಮೇಳದ ಉಪಯೋಗವೂ ಇರುತ್ತಿತ್ತು. ಪಾತ್ರವರ್ಗ ಮಾತಾಡುವದು, ನಾಟ್ಯಗಮಕದಲ್ಲಿ; ಮೇಳ ಹಾಡುವದು ಭಾವಗೀತ ವೃತ್ತಗಳಲ್ಲಿ. ಹಾಡುವದರ ಜೊತೆಗೆ ಮೇಳ ನರ್ತನವನ್ನೂ ಮಾಡಬೇಕು. ಆಯಾ ನಾಟಕಪ್ರಕಾರಗಳಲ್ಲಿ ಅಂತರವೇನೆಂದರೆ ರುದ್ರನಾಟಕ ತನ್ನ ವಸ್ತುವನ್ನು ಸಾಂಪ್ರದಾಯಿಕ ಪುರಾಣಕಥೆಗಳಿಂದ ಎತ್ತಿಕೊಳ್ಳುತ್ತಿತ್ತು—ಒಮ್ಮೊಮ್ಮೆ ಅರ್ವಾಚೀನ ಇತಿಹಾಸದಿಂದ ವಸ್ತುವನ್ನು ಪಡೆದಿರಬಹುದು. ರುದ್ರನಾಟಕ ಪ್ರಾಮುಖ್ಯವಾಗಿ ಗಂಭೀರ ಗತಿಯ ನಾಟಕ; ಸ್ಯಾತರ್‌ನಾಟಕ ಪುರಾಣದಿಂದ ತನ್ನ ಕತೆಯನ್ನು ತೆಗೆದುಕೊಂಡರೂ ಕೂಡ ನಿರ್ವಹಣೆ ಹಾಸ್ಯಪರವಾದದ್ದು; ವಿಕಟವೆಂದರೂ ಸರಿ. ಹರ್ಷನಾಟಕದ ವಸ್ತು ಸ್ವರಚಿತವಾದದ್ದು. ಸಮಕಾಲೀನ, ರಾಜಕೀಯ, ಸಾಮಾಜಿಕ ಅಥವಾ ಬೌದ್ಧಿಕ ಸಾಂಗತ್ಯದಿಂದ ವಿಷಯವನ್ನು ಸಂಗ್ರಹಿಸುತ್ತಿತ್ತು. ಅದರಲ್ಲಿ ಕಲ್ಪನಾವಿಲಾಸ, ಗೇಲಿ, ನಗರದ ಸಾಂದರ್ಭಿಕ ಜೀವನದ ವಿದಗ್ಧ ಟೀಕೆ. ಕವಡುಗಂಟಕ ನಗೆಗಾರಿಕೆ, ಇಂಥ ಸಂಗತಿಗಳ ಸರಿಬೆರಿಕೆ ಇರುತ್ತಿತ್ತು.

ರುದ್ರನಾಟಕದ ಉಗಮ ಸ್ಪಷ್ಟವಾಗಿಲ್ಲ; ಮಹತ್ವದ್ದೂ ಅಲ್ಲ. ಅದು ಇಂಥದೇ ಒಂದು ಸಂಸ್ಥೆಯಿಂದ ಹೀಗೇ ಉದ್ಗಮಿಸಿತು ಅಥವಾ ಒಂದು ವಿಶಿಷ್ಟ 'ಡಯೋನಿ

---

* ಪ್ರಮುಖ ಭಾರತೀಯ ಭಾಷೆಗಳಲ್ಲಿ ಅನುವಾದಿಸಲಿಕ್ಕೆಂದು ಸಾಹಿತ್ಯ ಅಕಾದೆಮಿಯವರು ಆರಿಸಿದ ವಿದೇಶೀಯ ಸಿದ್ಧಕೃತಿಗಳಲ್ಲಿ ಈ ನಾಲ್ಕು ಗ್ರೀಕ ನಾಟಕಗಳಿವೆ; ಈಸ್ಕಿಲಸನ ಅಗಮೆಮ್ನೋನ್; ಸೊಫೊಕ್ಲೀಸನ ಅಂತಿಗೊನೆ; ಯುರಿಪಿಡೀಸನ ಮೀಡಿಯ; ಅರಿಸ್ಟೋಫೆನೀಸನ ಕಪ್ಪೆಗಳು. ಬ್ರಿಟಿಶ ಕೌನ್ಸಿಲ್ಲಿನವರ ಸ್ನೇಹಪರ ಮಧ್ಯಸ್ತಿಕೆಯನ್ನು ಮನ್ನಿಸಿ ಪ್ರೊ. ಕಿಟ್ಟೋರವರು ನಮಗಾಗಿ ಈ ಉತ್ತಮ ಪರಿಚಯಲೇಖನವನ್ನು ಬರೆದಿದ್ದಾರೆ. ಅವರಿಗೆ ನಾವು ಋಣಿಯಾಗಿದ್ದೇವೆ.

ಸಸ್' ಆರಾಧನಾ ಪದ್ಧತಿಯಿಂದಲೇ ಹುಟ್ಟಿತೆನ್ನುವದು ಬಹುಶಃ ತಪ್ಪು ಎಂದೇ ಹೇಳಬೇಕು. ಇಷ್ಟು ಮಾತ್ರ ಸ್ಪಷ್ಟವಾಗಿದೆ: ಅತಿಪ್ರಾಚೀನ ರುದ್ರನಾಟಕ ಒಂದು ಬಗೆಯ ಮೇಳಗೀತಪರ ನಾಟಕೀಯ ಪ್ರಯೋಗವಾಗಿತ್ತು. ಅದರೊಳಗೊಂದು ನಟನಾಯೋಗ್ಯ ಪಾತ್ರ ಕಸಿಮಾಡಲ್ಪಟ್ಟಿರುತ್ತಿತ್ತು. ಇಂಥ ಮೇಳಗೀತದ ಮೇಲೆ 'ಡಯೋನಿಸಸ್' ದೇವತೆಯ ಡಿಥಿರ್‍ಯಾಂಬ್ ಮೇಳಗೀತ ಪದ್ಧತಿಯ ಪರಿಣಾಮವು ಇಲ್ಲದಿಲ್ಲ. 'ಡಿಥಿರ್‍ಯಾಂಬ್' ಎಂದರೆ ಐವತ್ತು ಜನರು ಕೂಡಿ ಹಾಡುವ 'ಡಯೋನಿಸಸ್' ಸಂಪ್ರದಾಯದ ಒಂದು ಸ್ತೋತ್ರರಚನೆ: ಆದರೆ ಆ ಕಾಲಕ್ಕೆ 'ಡಯೋನಿಸಸ್' ಸಂಪ್ರದಾಯವಲ್ಲದ ಅನೇಕ ಮೇಳಗೀತಗಳು ಪ್ರಚಲಿತವಾಗಿದ್ದವು. ಅಲ್ಲದೆ ಗ್ರೀಕ ರುದ್ರನಾಟಕ ಯಾವ ಕಾಲಕ್ಕೂ 'ಡಯೋನಿಸಸ್'-ನಿಷ್ಠವಾದ ಕಥಾವಸ್ತುಗಳನ್ನು ಆರಿಸಿಕೊಳ್ಳಲಿಲ್ಲ. 'ಡಯೋನಿಸಸ್' ಸಮಾರಾಧನೆಯ ಕಾರ್‍ಯಕ್ರಮದ ಒಂದು ಅಂಗವಾದ ಮಾತ್ರಕ್ಕೆ ಗ್ರೀಕ ರುದ್ರನಾಟಕ 'ಡಯೋನಿಸಸ್' ಪೂಜೆಯೊಳಗಿಂದ ಬೆಳೆದುಬಂದದ್ದೆಂದು ಖಂಡಿತವಾಗಿ ಸಿದ್ಧವಾಗುವದಿಲ್ಲ. ಇತರ ಕಾರಣಪರಂಪರೆಗಳನ್ನು ಹೇಳುವದು ಶಕ್ಯವಿದೆ. ಆದರೆ ಹರ್ಷನಾಟಕ ಹಾಗು 'ಸ್ಯಾತರ್' ವಿಕಟನಾಟಕಗಳು ಹಾಸ್ಯಾಂಗಪರನಾದ ಮಧುದೇವತೆ 'ಡಯೋನಿಸಸ್'ನಿಗೆ ನಿಕಟವಾಗಿ ಸಂಬದ್ಧವಾಗಿದ್ದವೆಂಬುದರಲ್ಲಿ ಸಂದೇಹವಿಲ್ಲ.

ಇನ್ನೂ ಹೊಸತಾದ ಈ ರುದ್ರನಾಟಕದ ಕಲೆಯನ್ನು 'ಪೆಸಿಸ್ಟ್ರೇಟಸ್' ಎಂಬ ಮೇಧಾವಿಯಾದ ಅರಸನು ಕ್ರಿ.ಪೂ. 535 ನೇ ವರುಷ 'ಡಯೋನಿಸಸ್' ಸಮಾರಾಧನೆಯ ಕಾರ್‍ಯಕ್ರಮದಲ್ಲಿ ಸೇರ್ಪಡೆಗೊಳಿಸಿದನು. ಐವತ್ತು ವರುಷಗಳ ನಂತರ ಹರ್ಷನಾಟಕಕ್ಕೂ ಅದೇ ರಾಜಕೀಯ ಮನ್ನಣೆ ದೊರಕಿತು. ಏತನ್ಮಧ್ಯ ರುದ್ರನಾಟಕದಲ್ಲಿ ಹಾಸ್ಯಪರ ವಿಶ್ರಾಮಕ್ಕಾಗಿ 'ಸ್ಯಾತರ್' ನಾಟಕದ ಕೆಲವು ಅಂಗಗಳು ಉಪಯೋಗಿಸಲ್ಪಡತೊಡಗಿದ್ದವು. ಈ ವಿಕಟನಾಟಕಗಳಲ್ಲಿ ಮೇಳ 'ಸ್ಯಾತರ'ರದು. 'ಸ್ಯಾತರ'ರೆಂದರೆ ಅರ್ಧಮಾನವ ಅರ್ಧ ಅಶ್ವ ಹೀಗೆ ದೇಹವುಳ್ಳ ಕಾಲ್ಪನಿಕ ಪ್ರಾಣಿಗಳು. ಸದ್ಯಕ್ಕೆ ಉಪಲಬ್ಧವಿದ್ದ ಎಲ್ಲ ಗ್ರೀಕ ನಾಟಕಗಳೂ ಐದನೆಯ ಶತಮಾನಕ್ಕೆ ಒಳಪಟ್ಟವು. ಆ ಸಮಯಕ್ಕೆ ದಬ್ಬಾಳಿಕೆ ನಷ್ಟವಾಗಿ 'ಅಥೆನ್ಸ'ದಲ್ಲಿ ಪ್ರಜಾಪ್ರಭುತ್ವ ನೆಲೆಗೊಂಡಿತ್ತು. ಈಸ್ಕಿಲಸ್ ಸೊಫೊಕ್ಲೀಸ್ ಯುರಿಪಿಡೀಸರ ಹಲವಾರು ನಾಟಕಗಳು ಇಂದೂ ಉಪಲಬ್ಧವಿವೆ. ಇತರ ಕವಿಗಳ ನಾಟಕಗಳು ಸಿಕ್ಕಿಲ್ಲ. ಉಪಲಬ್ಧವಿದ್ದ ಹರ್ಷನಾಟಕಗಳೆಲ್ಲ 'ಅರಿಸ್ಟೋಫೆನೀಸ್' ನವು. ಅವು ಕ್ರಿ.ಪೂ. 425 ಮತ್ತು 388ರ ಮಧ್ಯ ಅಂತರದಲ್ಲಿ ಬರೆಯಲ್ಪಟ್ಟವು. ಮೆನಾಂಡರನ (ಕ್ರಿ.ಪೂ. 342 ರಿಂದ 292) ನಾಲ್ಕು ನಾಟಕಗಳು ಕಿಂಚಿತ್ ಅಪೂರ್ಣಾವಸ್ಥೆಯಲ್ಲಿ ಉಪಲಬ್ಧವಿರುತ್ತವೆ.

ಅಥೆನ್ಸಿನ ನಾಟಕ ವೈಭವಶಾಲಿಯಾದ ಸಾರ್ವಜನಿಕ ಸಮಾರಾಧನೆಯ ಅಂಗವಾಗಿದ್ದದ್ದು ಮಹತ್ವದ ಸಂಗತಿ. ಅವುಗಳ ಅರ್ಥಗ್ರಹಣಕ್ಕೆ ನಾವು ಈ ವಿಷಯವನ್ನು ನೆನಪಿಟ್ಟುಕೊಳ್ಳಬೇಕು. ವಿಶಾಲವಾದ ಪ್ರೇಕ್ಷಕಸಮುದಾಯ—ಸಂಖ್ಯೆಯಲ್ಲಿ ಸುಮಾರು ಹದಿನೈದು ಸಾವಿರದಷ್ಟು ಇರಬೇಕು. 'ಅಥೆನ್ಸಿ'ನ ಅಖಿಲ ನಾಗರಿಕ ವೃಂದವೆಂದರೂ ಸರಿ. ರಾಷ್ಟ್ರೀಯ ಧೋರಣಗಳ ಬಗ್ಗೆ ನಿರ್ಣಾಯಕ

ಚರ್ಚೆಗಳನ್ನು ಮಾಡುವದಕ್ಕಾಗಿ ಕೂಡುತ್ತಿದ್ದ ಅಧಿಕಾರಶೀಲ ನಾಗರಿಕ ಸಭೆಯ ಸಭಾಸದರು ಅವರಲ್ಲ. ಅಂತೆಯೇ ಒಕ್ಕಟ್ಟಾದ, ಅನುಭವಿಯಾದ, ಪರಿಪಕ್ವವಾದ ಪ್ರೇಕ್ಷಕವೃಂದ; ಅಂದಮೇಲೆ ರುದ್ರನಾಟಕಕಾರರು ಅವರಿಂದ ಉಚ್ಚಮಟ್ಟದ ವಿಚಾರಪರತೆಯನ್ನೂ ಗ್ರಹಣಸಾಮರ್ಥ್ಯವನ್ನೂ ಅಪೇಕ್ಷಿಸಬಹುದಾಗಿತ್ತು; ಅದ ರಂತೆಯೇ ಹರ್ಷ ವ್ಯಂಗ್ಯ ನಾಟಕಕಾರರು. ರಾಜಕೀಯ ವ್ಯಾಜೋಕ್ತಿಯನ್ನೂ ಪ್ರಾಸಂಗಿಕ ವಿವರಗಳನ್ನೂ ಬಳಸಿಕೊಳ್ಳುವದಲ್ಲದೆ, ರುದ್ರನಾಟಕಕಾರರ ವಿಡಂಬನೆ ಯನ್ನೂ ಮಾಡಬಹುದಿತ್ತು.

ರುದ್ರನಾಟಕಗಳ ಬಾಹ್ಯಾಂಗಗಳ ರೂಪ ಕಟ್ಟುನಿಟ್ಟಾಗಿ ಪಾಲಿಸಲ್ಪಡು ತ್ತಿತ್ತು. ಸ್ವಾಭಾವಿಕತೆಯತ್ತ ಅವುಗಳ ಓಘವಿರಲಿಲ್ಲ. ಆದರೆ ನಾಟ್ಯಸಹಜ ಘರ್ಷಣೆಗೆ ರಚನೆಯ ಕಟ್ಟುನಿಟ್ಟು ಪೋಷಕವಾಯಿತು. ನಟರ ಸಂಖ್ಯೆ ಕಡಿಮೆ. ಮೊದಮೊದಲು ಒಂದೇ ಪಾತ್ರ, ನಂತರ ಎರಡು, ನಂತರ ಮೂರು. ಆದರೆ ಅದೇ ನಟನು ಒಂದಕ್ಕಿಂತ ಹೆಚ್ಚು ಪಾತ್ರಗಳನ್ನು ವಹಿಸಬಹುದಾಗಿತ್ತು. ಸಾಂಪ್ರದಾಯಿಕ ಸಂಭಾಷಣೆ,—ಉದ್ದ ವಾದ ಭಾಷಣಗಳು; ನಡುನಡುವೆ ಪ್ರಶ್ನೋತ್ತರರೂಪವಾದ ಒಂಟಿ ಸಾಲುಗಳು. ರುದ್ರನಾಟಕ ಪದ್ಧತಿಯ ಹ್ರಾಸಕಾಲದವರೆಗೆ ಮೇಳವೇ ಪ್ರಯೋಗದ ಕೇಂದ್ರ ಸ್ಥಾನವಾಗಿತ್ತು; ಅದರ ವಿಶಾಲವಾದ ನಾಟ್ಯರಂಗವೇ ಪ್ರೇಕ್ಷಕರ ಕುತೂಹಲ ಕೇಂದ್ರವಾಗಿತ್ತು. ರುದ್ರನಾಟಕ ವಿಷಯಗಳನ್ನು ಪುರಾಣಕಥೆಯಿಂದಲೇ ಬಹುಶಃ ಆರಿಸಿಕೊಂಡರೂ, ಕವಿ ಉದ್ದೇಶಕ್ಕನುಗುಣವಾಗಿ ಬೇಕಾದ ಮಾರ್ಪಾಡುಗಳನ್ನು ಮಾಡಿಕೊಳ್ಳುತ್ತಿದ್ದನು. ಅದರಂತೆ ಹರ್ಷನಾಟಕದಲ್ಲಿ ಪುರಾಣವಸ್ತುವೇ ವ್ಯಂಗ್ಯ ಹಾಸ್ಯಕ್ಕೆ ತರ್ಜುಮೆಯಾಗುತ್ತಿತ್ತು.

"ಧಾರ್ಮಿಕ"—ಈ ಶಬ್ದದಲ್ಲಿ, ಒಂದು ದೇವತೆಯ ಭಕ್ತಿಪುರಸ್ಸರ ಪೂಜೆ ಹಾಗು ಆರಾಧನೆ ಎಂಬ ಅರ್ಥವು ಸೂಚಿತವಾಗುತ್ತಿದ್ದರೂ ಗ್ರೀಕ ನಾಟಕ ಧಾರ್ಮಿಕವಲ್ಲವೆಂದೇ ಹೇಳಬೇಕು. ಅದು ದೇವತಾಪುರಸ್ಸರ ಉತ್ಸವವೊಂದರ ಅಂಗವೇನೋ ನಿಜ; ದೇವತೆಗಳು ಅದರ ಕಥಾವಸ್ತುವಿನಲ್ಲಿ ಪ್ರತ್ಯಕ್ಷವಾಗಿಯೋ ಅಪ್ರತ್ಯಕ್ಷವಾಗಿಯೋ ಭಾಗವಹಿಸುತ್ತಿದ್ದುದೂ ನಿಜ; ಆದರೆ "ಕಪ್ಪೆಗಳು" ಅಂಥ ಹರ್ಷನಾಟಕ ಮೇಲೆ ಹೇಳಿದ ಅರ್ಥದಲ್ಲಿ ಧಾರ್ಮಿಕವಲ್ಲವೆಂಬುದು ಮೇಲೆಯೇ ಕಾಣಿಸುತ್ತದೆ. ಆದರೆ ಗ್ರೀಕ ರುದ್ರನಾಟಕ ಆಧುನಿಕ ನಾಟಕಗಳಂತೆ ಲೌಕಿಕವೂ ಅಲ್ಲ; ವ್ಯಕ್ತಿಯ ಸಮಸ್ಯೆ ಸಂಘರ್ಷಣೆಗಳಷ್ಟನ್ನೇ ಸರಳವಾಗಿ ಇವು ನಿರೂಪಿಸುವದಿಲ್ಲ. ಇವು ನಾಟಕದ ಒಂದು ಮಹತ್ವದ ಅಂಗವಾಗಿರಬಹುದಷ್ಟೇ! ಅದರಂತೆಯೇ, ಕೇವಲ ಸಾಮಾಜಿಕ ಇಲ್ಲವೆ ರಾಜಕೀಯ ಸಮಸ್ಯೆಗಳ ಕುರಿತು ಇವು ಬರೆಯಲ್ಪಡ ಲಿಲ್ಲ; "ಅಂತಿಗೊನೆ"ಯಲ್ಲಿ ಕೂಡ ಬರಿ ವೈಯಕ್ತಿಕ ಸದಸದ್ವಿವೇಕ ಹಾಗು ರಾಜಾಜ್ಞೆ, ಇವುಗಳ ಸಂಘರ್ಷವೊಂದೇ ವಿಷಯವು ಪಣಕ್ಕೆ ಬಿದ್ದಿಲ್ಲ. ಅದರ ಹಿನ್ನೆಲೆಯು ಸಮಕಾಲೀನ ಸಾಮಾಜಿಕ ಇಲ್ಲವೆ ರಾಜಕೀಯ ಜೀವನವಲ್ಲ. ಇದಿಷ್ಟೇ ಅರ್ಥದಲ್ಲಿ ಅದು ಧಾರ್ಮಿಕ; ಅಖಿಲ ಮಾನವ್ಯವೇ, ಮಾನವ್ಯದ ಚಿರಂತನ ತತ್ವಗಳೇ, ಅದರ ಅಭೇದ್ಯ ಮರ್ಯಾದೆಗಳೇ, ಈ ನಾಟಕದ ಹಿನ್ನೆಲೆಯಾಗಿವೆಯೆಂಬ ಅರ್ಥದಲ್ಲಿ

ಅದು ಧಾರ್ಮಿಕ. ಮಾನವ್ಯದ ಚಿರಂತನ ಕಟ್ಟಳೆಗಳನ್ನು, ಎಲ್ಲೆಕಟ್ಟುಗಳನ್ನು ನಾಟಕ ರೂಪವಾಗಿ ಪ್ರದರ್ಶಿಸುವದೇ ರುದ್ರನಾಟಕಗಳಲ್ಲಿ ದೇವತೆಗಳು ವಹಿಸುವ ಮುಖ್ಯ ಕಾರ್ಯ ; ಕ್ರೀಯೋನನಂಥ ರುದ್ರಪಾತ್ರಗಳು ಈ ತತ್ವಗಳನ್ನು ವಿರೋಧಿಸಿ ವಿಫಲಗೊಳ್ಳುತ್ತವೆ.

"ಅಗಮೆಮ್ನೋನ್" ನಾಟಕ "ಆರೆಸ್ಟಿಸ್" ನಾಟಕತ್ರಯದ ಪ್ರಥಮ ಭಾಗ ; ಸ್ವತಂತ್ರ ನಾಟಕವಲ್ಲ. ಅಪರಾಧ ಹಾಗು ಶಿಕ್ಷೆ—ಈ ಸಮಸ್ಯೆಯನ್ನು ಈಸ್ಕಿಲಸನು ಇದರಲ್ಲಿ ನಿರೂಪಿಸುತ್ತಾನೆ. ಅವನ ಮಟ್ಟಿಗೆ ಈ ಸಮಸ್ಯೆ ಎರಡು ಚಿರಂತನ ತತ್ವಗಳ ಮೇಲೆ ನಿಂತಿದೆ: ಒಂದು, ಅನ್ಯಾಯವೊಂದನ್ನು ಎಸಗಿದ ನಂತರ ತದ್ವಿರುದ್ಧ ಒಂದಿಲ್ಲೊಂದು ಬಗೆಯಿಂದ ಪ್ರತಿಕ್ರಿಯೆಯುಂಟಾಗಿ ಜೀವನವು ಮೊದಲಿನ ಸಮತೂಕದತ್ತ ಯತ್ನಿಸತೊಡಗುತ್ತದೆ: ಎರಡು, ಔದ್ಧತ್ಯ (Hybris) ಹೆಚ್ಚು ಔದ್ಧತ್ಯವನ್ನು ಪ್ರಚೋದಿಸಿ ಕೊನೆಗೆ ಗೊಂದಲದಲ್ಲಿ ಅಡಗುತ್ತದೆ. "ಅಗಮೆಮ್ನೋನ್" ನಾಟಕ ಅನ್ಯಾಯಪರಂಪರೆಯನ್ನೇ ಚಿತ್ರಿಸಿ, ಪ್ರತಿಯೊಂದು ಅನ್ಯಾಯವೂ ಪ್ರತ್ಯಕ್ಷ ಹಾಗು ಹಿಂಸ್ರ ಪ್ರತೀಕಾರಕ್ಕೆ ಗುರಿಯಾದ ರೀತಿಯನ್ನು ಚಿತ್ರಿಸುತ್ತದೆ. ಹಿಂಸ್ರ ಪ್ರತೀಕಾರವು ಉಂಟಾಗುವದು ಮಾನವರ ಕೃತಿಗಳಿಗಷ್ಟೇ ಅಲ್ಲ; ದೇವತೆಗಳ ಕೃತಿಗೂ ಆಗುವದುಂಟು. **ಪ್ಯಾರೀಸನ** ಅಕೃತ್ಯದ ಸೇಡು ತೀರಿಸುವದಕ್ಕಾಗಿ **ಅಗಮೆಮ್ನೋನನು** ಯುದ್ಧಕ್ಕೆ ಸನ್ನದ್ಧನಾಗುತ್ತಾನೆ; ಆದರೆ ಇದು ದೇವತೆಗಳ ತಂದೆಯಾದ **ಝೀಯೂಸ್** ದೇವನ ಹಂಚಿಕೆಯೂ ಹೌದು. ಮುಂಬರುವ ರಕ್ತಪಾತಕ್ಕೆ ಸಿಟ್ಟಾದ **ಆರ್ಟೆಮೀಸ** ದೇವತೆಯು ಅದರ ಬದಲಾಗಿ **ಅಗಮೆಮ್ನೋನನ** ರಕ್ತದ ಆಹುತಿಯನ್ನು ಬೇಡುತ್ತಾಳೆ. ತಾವೇ ಒಪ್ಪಿಸಿಕೊಟ್ಟ ಕೆಲಸವನ್ನು ನಡಸಿದುದಕ್ಕಾಗಿ ದೇವತೆಗಳು ಅವನನ್ನು ಶಿಕ್ಷಿಸುತ್ತಾರೆ—ಕ್ರೂರ ಪ್ರತಿಕ್ರಿಯೆಯೇ ನ್ಯಾಯದ ತಳಹದಿ ಎಂಬ ಹುಂಬ ತಿಳಿವಳಿಕೆಯ ಮುಖಾಂತರ ಸಹಜವಾಗಿ ಜನಿಸುವ ವಿರೋಧಾಭಾಸ ಇದು. ಇಂಥದಕ್ಕೆ ಕೊನೆಯೆಲ್ಲಿ ? ಅಂತೆಯೇ, ವ್ಯಭಿಚಾರಿಣಿಯಾದ ಕ್ಲಿಟೆಮ್ನೆಸ್ಟ್ರಾ ತನ್ನ ಮಗಳ ಸೇಡಿಗಾಗಿ ಅಗಮೆಮ್ನೋನನ ಕೊಲೆಗೈಯುತ್ತಾಳೆ; ಇದಲ್ಲದೆ, ಒಂದು ವೇಳೆ ಅವಳಿಂದ ಈ ಕಾರ್ಯವಾಗದಿದ್ದರೆ ಟ್ರೋಯದಲ್ಲಿ ಮಡಿದ ಗ್ರೀಕರ ಸೇಡು ತೀರಿಸಲಿಕ್ಕೊಂದು ಇನ್ನಾರಾದರೂ ಇದೇ ಕೆಲಸವನ್ನು ಮುಗಿಸಬಹುದಾಗಿತ್ತೆಂಬ ಸೂಚನೆಯೂ ಇಲ್ಲಿಉಂಟು. ಹೇಡಿಯೂ ಜಾರನೂ ಆದ ಈಜಿಸ್ಥಸನು ಕ್ಲಿಟೆಮ್ನೆಸ್ಟ್ರಾಳ ಸೇಡಿನಲ್ಲಿ ನೆರವಾಗುತ್ತಾನೆ. ಅವನಾದರೂ ತನ್ನ ತಂದೆ ಥಿಯೆಸ್ಟೀಸನ ಕಾಲದಿಂದ ಪ್ರಾರಂಭವಾದ ಕ್ರೂರ ಸೇಡಿನ ಕಾರಣಪರಂಪರೆಯನ್ನೇ ಮುಂದುವರಿಸಿದ್ದಾನೆ. ಥಿಯೆಸ್ಟೀಸನು ತನ್ನ ಅಣ್ಣ ಆಟ್ರಿಯಸನ ಹೆಂಡತಿಯನ್ನು ವ್ಯಭಿಚರಿಸಲಾಗಿ ಆಟ್ರಿಯಸನು ಸೇಡಿಗಾಗಿ ಅವನ ಮಕ್ಕಳ ಮಾಂಸವನ್ನು ಆತನಿಗೆ ಬಡಿಸಿದನು. ಕ್ರೂರ ಸೇಡಿನ ಈ ಮನೋಗತವೇ ಆಟ್ರಿಯಸನ ಮನೆತನದ ಶಾಪವಾಗಿದ್ದು ಅದು ಎರಾಯನೀಸ್ ಎಂಬ ಭೂತಗಣಗಳಾಗಿ ಚಿತ್ರಿಸಲ್ಪಟ್ಟಿದೆ. ನಾಟಕದಲ್ಲಿ ಈ ಭೂತಗಳೇ ದೇವತೆಗಳ ದೂತಕಾರ್ಯವನ್ನು ಎಸಗುವದುಂಟು. ಅಪೋಲೋ ದೇವನು ಕ್ಯಾಸಾಂಡ್ರಾಳ ಮೇಲೆ ಸೇಡು ತೀರಿಸುವದಾದಾಗ, ಅನೇಕ ಕೊಲೆಗಳ ಸ್ಥಾನವಾಗಿ

ಭೂತಗಣಗಳ ವಾಸಸ್ಥಾನವಾದ ಅಗಮೆಮ್ನೋನನ ಅರಮನೆಯಲ್ಲಿಯೇ ಅವಳ ಕೊಲೆಯಾಗುವಂತೆ ಮಾಡುತ್ತಾನೆ. ಇದೆಲ್ಲವೂ ಗೊಂದಲದಲ್ಲಿಯೇ ಪರಿಣಮಿಸಬೇಕಲ್ಲವೇ ? ಶೇಕ್‌ಸ್ಪಿಯರನಂತೆ ಈಸ್ಕಿಲಸನು ರಾಜಹತ್ಯೆ, ಪರಚಕ್ರ, ದಬ್ಬಾಳಿಕೆ, ಇವುಗಳನ್ನು ಈ ಗೊಂದಲದ ಸಂಕೇತವಾಗಿ ಬಳಸುತ್ತಾನೆ. ಈ ನಾಟಕತ್ರಯದ ಇತರ ಭಾಗಗಳು ಮಾನವರಲ್ಲಿ ಹಾಗು ದೇವತೆಗಳಲ್ಲಿ ಹೆಚ್ಚು ಸಹ್ಯವಾದ ನ್ಯಾಯಾನ್ಯಾಯವಿಚಾರವು ಉದ್ಗಮಿಸಿದುದನ್ನು ಚಿತ್ರಿಸುತ್ತದೆ, ಕೊನೆಯದಾಗಿ ವ್ಯವಸ್ಥೆ ಹಾಗು ಅಧಿಕಾರದ ಪುನರುತ್ಥಾಪನ, ನಿರ್ಲಿಪ್ತವಾದ ನ್ಯಾಯದ ಸಂಸ್ಥಾಪನೆ, ಇವುಗಳನ್ನೊಳಗೊಂಡ ಸುಸಂಸ್ಕೃತ ನಗರರಾಜ್ಯದ ಚಿತ್ರಣದಲ್ಲಿ ಕೊನೆಗಾಣುತ್ತದೆ. ಇಂತು, ಈ ನಾಟಕತ್ರಯದಲ್ಲಿ ಈಸ್ಕಿಲಸನು ಹೇಗೆ ಮಾನವರಲ್ಲಿ ಸೇಡು ಹಾಗು ಹಿಂಸೆಗಳಿಗೆ ಮಿಕ್ಕಿದ ನ್ಯಾಯಸಂಸ್ಥೆ ಬೆಳೆದುಬಂದಿತೆಂಬ ವಸ್ತುವನ್ನು ರೂಪಿಸಿದ್ದಾನೆ.

"ಅಂತಿಗೊನೆ" ನಾಟಕದಲ್ಲಿ ಅಡಕವಾದ ತತ್ವವೂ ಇಷ್ಟೇ ಆಳವಾಗಿದೆ. ಕ್ರೀಯಾನ ಅರಸನು ಪ್ರಾಮಾಣಿಕನಾದರೂ ಕಿರಿಯಗಲ ಮನಸ್ಸಿನವನು. ಮಾನವತೆಯ ಕೆಲವು ಆಳವಾದ ಪವಿತ್ರವಾದ ಸಮರ್ಥವಾದ ಮನೋಭಾವಗಳನ್ನು ತಿರಸ್ಕರಿಸುತ್ತಾನೆ; ಇವನ್ನೇ ಗ್ರೀಕ ಕವಿಗಳು ದೇವತೆಗಳೆಂದು ಕರೆಯುವದುಂಟು. ಅಂತಿಗೊನೆಯ ಬಗ್ಗೆ ಹೇಮನನಿಗಿದ್ದ ಪ್ರೀತಿ,—ಇಂಥ ವಿಷಯಗಳನ್ನು ಸುಲಭವಾಗಿ ತಾತ್ಸಾರಮಾಡಿ ಹತ್ತಿಕ್ಕುವದು ಸಾಧ್ಯವೆಂದು ಕ್ರೀಯಾನನು ತಿಳಿದುಕೊಂಡಿದ್ದಾನೆ. ಆದರೆ ತನ್ನದೇ ಅಮಾನುಷತೆಯು ಅವನಮೇಲೆ ತಿರುಗಿ ಬೀಳುತ್ತದೆ; ಅವನ ಹೆಂಡತಿ ಹಾಗು ಮಗ ತಾವೇ ತಮ್ಮ ನಾಶಮಾಡಿಕೊಳ್ಳುತ್ತಾರೆ; ಕ್ರೀಯಾನನು ತಾನೇ ನಿರ್ಮಿಸಿದ ವಿನಾಶದ ನಡುವೆ ಒಂಟಿಗನಾಗಿ ನಿಲ್ಲಬೇಕಾಗುತ್ತದೆ. ಸಾಮಾನ್ಯ ಮಾನವ್ಯದ ಬೇಡಿಕೆಗಳು ರಾಜಕಾರಣಕ್ಕಿಂತ ಹೆಚ್ಚಿನವು, ಅವನ್ನು ಮನ್ನಿಸುವದು ಜಾಣತನ, ಎಂಬುದೇ ಇದರ ಸಾರ.

ಮೀಡಿಯ ನಾಟಕ ವಿಕಾರವಶಳಾದ ಸ್ತ್ರೀಯೋರ್ವಳು ಮೊದಲು ಪ್ರೀತಿಸಿ, ನಂತರ ದ್ವೇಷದಿಂದ ಕಲಕಿಹೋಗುವ ಸ್ವಭಾವಚಿತ್ರವೆಂದು ಭಾವಿಸುವದು ಸ್ವಾಭಾವಿಕ. ಆದರೆ ನಿಜವಾಗಿ ಅದು ಇಷ್ಟೇ ಇರುವದಿಲ್ಲ. ಅಥೆನ್ಸಿನ ಪ್ರಚಂಡ ಪ್ರೇಕ್ಷಕಸಮುದಾಯವು ಕೇವಲ ರಸಾನುಭವ ಹಾಗು ಬೌದ್ಧಿಕ ಆನಂದಕ್ಕಾಗಿ ಈ ವಿಶಾಲನಾಟಕ ಗೃಹಕ್ಕೆ ಹೋಗುವ ದಿನವು ಬೇಗನೆ ಬರಲಿತ್ತು. ಆದರೆ ಇನ್ನೂ ಬಂದಿರಲಿಲ್ಲ. ನಾವು ಈ ನಾಟಕವನ್ನು ಕೇವಲ ಸ್ವಭಾವಚಿತ್ರವೆಂದಾಗಿ ಭಾವಿಸಿದ್ದಾದರೆ ಅರ್ಥಹಾನಿಯಾಗುತ್ತದೆ. ಏಕೆಂದರೆ ಸೂರ್ಯದೇವನು ತನ್ನ ಮಾಯಾವಿಯಾದ ರಥದೊಂದಿಗೆ ಬಂದೊದಗುವದು ನಾಟಕವನ್ನು ಹೇಗಾದರೂ ಮುಗಿಸುವ ಕೃತ್ರಿಮ ಯುಕ್ತಿಯೆನಿಸಬೇಕಾದೀತು. ಯುರಿಪಿಡೀಸಿನ ನಾಟಕದಲ್ಲಿ ದೇವತೆಗಳಿನ್ನೂ ಇದ್ದಾರೆ; ಅವರು ಅನೇಕ ಬಾರಿ ವಿಚಾರಶೂನ್ಯ ಕ್ರೌರ್ಯವನ್ನು ತೋರುವದುಂಟು. ಸೊಫೊಕ್ಲೀಸನು ತನ್ನ ಮೇಳದಿಂದ ಅಫ್ರೋದಿತಿಯ ಅಗಾಧ ಸಾಮರ್ಥ್ಯದ ಸ್ತುತಿಯನ್ನು ಹಾಡಿಸಿದಾಗ ಅವನು ತನ್ನ ನಾಟಕದ ಕೊನೆಯತ್ತ ಲಕ್ಷ್ಯವಿತ್ತಿರುತ್ತಾನೆ: ಹೇಮನನು ತನ್ನ ತಂದೆ ತನ್ನನ್ನೂ ಅಂತಿಗೊನೆಯನ್ನೂ ನಡಸಿಕೊಂಡ ರೀತಿಯಿಂದ

ರೋಸಿಹೋಗಿ ಕ್ರೀಯೊನನ್ನು ಕೊಲ್ಲಲು ಉದ್ಯುಕ್ತನಾಗುತ್ತಾನೆ; ಇದು ಅಫ್ರೋದಿತಿಯದೇ ಶಕ್ತಿಯಿಂದ ಆದದ್ದು. 'ಮೀಡಿಯ'ದಲ್ಲಿ ಕೂಡ ಅಫ್ರೋದಿತಿಯ ಸಾಮರ್ಥ್ಯದ ಚಿತ್ರಣವಿದೆ. ಯುರಿಪಿಡೀಸಿನ ಇತರ ನಾಟಕಗಳಲ್ಲಿ ಬೇರೆ ಬೇರೆ ದೇವತೆಗಳ ಸಾಮರ್ಥ್ಯವು ಹೀಗೆಯೇ ಉದಾಹರಿಸಲ್ಪಟ್ಟಿದೆ. ಮಾನವನ ಸ್ವಭಾವ ಪ್ರೇಮ ಮತ್ತು ಪಾವಿತ್ರ್ಯ, ಭಾವನೆ ಮತ್ತು ಬುದ್ಧಿ, ಇಂಥ ದ್ವಂದ್ವಪ್ರವೃತ್ತಿಗಳ ಸರಿಬೆರಿಕೆಯಾಗಿರಬೇಕೆಂಬ ತತ್ವವನ್ನು ವಿವರಿಸುವದೇ ಅವನ ಉದ್ದೇಶವಾಗಿದೆ. ಈ ಸಮತೋಲನವನ್ನು ಕಾಯ್ದುಕೊಂಡರೆ ಎಲ್ಲವೂ ಸರಿ. ಆದರೆ, 'ಮೀಡಿಯ'ದಂತೆ ಭಾವನೆಗಳೇ ವಿವೇಕವನ್ನು ಮುಳುಗಿಸಿಬಿಟ್ಟರೆ ಪರಿಣಾಮ—ಸರ್ವನಾಶ; 'ಮೀಡಿಯ'ದಲ್ಲಿ ಇದು ವೈಯಕ್ತಿಕನಾಶವಷ್ಟೇ ಅಲ್ಲ, ಸಾರ್ವಜನಿಕ ನಾಶವೂ ಹೌದು. 'ಮೀಡಿಯ'ಳಿಗೆ ತನ್ನದೇ ಸಂಕಟವಿದೆ ನಿಜ; ಆದರೆ, ಕೊಲೆಯಾಗುವದು ಮಕ್ಕಳದು, ನಿರಪರಾಧಿಯಾದ ವಧುವಿನದು, ಅವಳ ತಂದೆಯದು. 'ಮೀಡಿಯ'ಳು ತನ್ನ ತಂದೆ ಸೂರ್ಯದೇವನು ಕಳಿಸಿಕೊಟ್ಟ ರಥವನ್ನು ಏರಿ ಪಾರಾಗುತ್ತಾಳೆ. ಕಟ್ಟಳೆಯಿಲ್ಲದ ಸ್ವಾಭಾವಿಕ ಪ್ರವೃತ್ತಿಗೆ ಗೆಲುವಾಗುತ್ತದೆ. 'ಅರಿಸ್ಟಾಟಲ'ನು ತನ್ನ 'ಕಾವ್ಯಶಾಸ್ತ್ರ'ದಲ್ಲಿ ಯುರಿಪಿಡೀಸನನ್ನು ರುದ್ರತಮ ನಾಟಕಕಾರನೆಂದು ಕರೆದಿದ್ದಾನೆ; ಇದು ನ್ಯಾಯವಾದ ಮಾತು. ಈಸ್ಕಿಲಸ್ ಸೊಫೊಕ್ಲೀಸರು ತಮ್ಮ ನಾಟಕದ ಮುಕ್ತಾಯಕ್ಕೆ ಹುಟ್ಟಿಸುವ ಮನೋಭಾವವೇನೆಂದರೆ — ಮನುಷ್ಯನು ಯೋಗ್ಯವಿವೇಕ, ಮುನ್ನೆಚ್ಚರಿಕೆ, ಹವಣುಹದಗಳಿಂದ ವರ್ತಿಸಿದರೆ ಅತಿ ದುಃಖಪ್ರದವಲ್ಲದ ಜೀವನವನ್ನು ಬಾಳುವ ಸಂಭವ ಸಾಕಷ್ಟು ಉಂಟು, ಎಂದು. ಯುರಿಪಿಡೀಸನು ಚಿತ್ರಿಸುವದಾದರು ಮೀಡಿಯಳಂತಹ ಅವಿವೇಕಿ ಹೆಂಗಸಿನ ಜೀವನ, ಅಥವಾ ತನ್ನ ಯುದ್ಧನಾಟಕಗಳಲ್ಲಿ ಹೇಗೆ ಸಮಾಜಕ್ಕೆ ಸಮಾಜವೇ ತನ್ನ ಅವಿವೇಕ ಹಾಗು ಮನೋವಿಕಾರಕ್ಕೆ ತಾನೇ ತುತ್ತಾಗಿ ತನ್ನ ಮತ್ತು ಇತರರ ಮೇಲೆ ಭೀಕರ ಗಂಡಾಂತರವನ್ನು ತರುವ ದೃಶ್ಯ. ಉದಾಹರಣಾರ್ಥ ಗ್ರೀಕರು 'ಟ್ರಾಯ' ನಗರವನ್ನು ಮುತ್ತಿದ ಕಥೆ. ಯುರಿಪಿಡೀಸನು ಸೊಫೊಕ್ಲೀಸನಿಗಿಂತ ಹದಿನೈದೇ ವರುಷಗಳಿಂದ ಕಿರಿಯನಾದರೂ ಇನ್ನಾವುದೋ ಬೇರೆಯೇ ಕಾಲದವನಂತೆ ಕಾಣಿಸುತ್ತಾನೆ. ಕ್ರಿ.ಪೂ. 5 ನೆಯ ಶತಮಾನದ ಕೊನೆಯ ದಶಕಗಳಲ್ಲಿ ಸಾಧಾರಣ ಗ್ರೀಕ ದೇಶದಲ್ಲಿ—ವಿಶೇಷತಃ 'ಅಥೆನ್ಸ' ನಗರದಲ್ಲಿ ಬುದ್ಧಿಪ್ರಧಾನ ಯುಗವು ತಲೆದೋರಿತು. ಪಶ್ಚಿಮ ಯುರೋಪದಲ್ಲಿ ಹದಿನೇಳನೆಯ ಶತಮಾನದ ದ್ವಿತೀಯಾರ್ಧದಲ್ಲಿ ಹುಟ್ಟಿದ ಬೌದ್ಧಿಕ ಯುಗಕ್ಕೆ ಇದನ್ನು ಹೋಲಿಸಬಹುದು. ಈ ಬೌದ್ಧಿಕ ಕ್ರಾಂತಿಯ ಸಂಕೇತಪುರುಷನು ಸಾಕ್ರಟೀಸನು. ಈ ಹೊಸ ಬುದ್ಧಿಪ್ರಧಾನತೆಯ ಮೂಲಕ ಕೆಲವು ಒಳ್ಳೆಯ, ಕೆಲವು ಕೆಟ್ಟ ಪರಿಣಾಮಗಳು ತಲೆದೋರಿದವು. ಒಂದು, ಧಾರ್ಮಿಕ ರುದ್ರನಾಟಕ ಕಣ್ಮರೆಯಾಯಿತು; ಅದು ಬುದ್ಧಿಪ್ರಧಾನ ಚಿಕಿತ್ಸಕ ಯುಗದಲ್ಲಿ ಬದುಕುವದು ಶಕ್ಯವಿರಲಿಲ್ಲ. ಅರಿಸ್ಟೋಫೆನೀಸನಂತೆ ಈ ಬೌದ್ಧಿಕತೆಯ ದುಷ್ಪರಿಣಾಮಕ್ಕೆ ಒಳಪಟ್ಟ ಗ್ರೀಕರು ಅದರ ಬಗ್ಗೆ ಸಾರ್ಥಕವಾಗಿ ವಿಧಾನಿಸಬಹುದಾದ ವಿಷಯಗಳೆಂದರೆ, ದುರಂತವು ಜನರನ್ನು ಚಪಲರನ್ನಾಗಿ ಮಾಡಿತಲ್ಲದೆ ಚತುರರನ್ನಾಗಿ ಮಾಡಲಿಲ್ಲ; ಅದು ಧರ್ಮಶ್ರದ್ಧೆಯನ್ನು

ಸಡಿಲಿಸಿ ಕಿರಿಯಾಳ ವಾಗ್ವಾದಕ್ಕೆ ದಾರಿಮಾಡಿಕೊಟ್ಟಿತು. ಅದು ಜನರನ್ನು ಅಹಂಮನ್ಯರನ್ನಾಗಿ ಮಾಡಿತು; ನಾಗರಿಕ ಜನತೆಯಲ್ಲಿಯ ಒಕ್ಕಟ್ಟನ್ನೂ ಸಂಯಮವನ್ನೂ ಲೋಪಗೊಳಿಸಿತು, ಇತ್ಯಾದಿ. ಇದಲ್ಲದೆ ಕ್ರಿ.ಪೂ. 431 ರಲ್ಲಿ ಅಥೆನ್ಸಿಗೂ ಅದರ ಹಳೆಯ ಹಗೆ ಸ್ಪಾರ್ಟಾಕ್ಕೂ ಕಟುವಾದ ಯುದ್ಧ ಹುಟ್ಟಿ ಇಪ್ಪತ್ತೇಳು ವರುಷ ಅಖಂಡವಾಗಿ ನಡೆದು ಅಥೆನ್ಸಿಗೆ ಸಂಪೂರ್ಣ ಸೋಲುಂಟಾಯಿತು. ಯುದ್ಧಕಾಲದಲ್ಲಿ ಯಥಾಪ್ರಕಾರ ಜನತೆಯ ನೈತಿಕಜೀವನ ಕುಗ್ಗಿತು. ದುಷ್ಟರೂ ಅಸಂಸ್ಕೃತರೂ ರಾಜಕೀಯ ವರ್ಚಸ್ಸನ್ನು ಹೆಚ್ಚುಹೆಚ್ಚಾಗಿ ಪಡೆಯತೊಡಗಿದರು. ಈ ಎಲ್ಲ ಕೇಡಿನ ಹೊಣೆಯನ್ನು ಕೆಲವರು ಬುದ್ಧಿವಾದಿಗಳ ಮೇಲೆ, ಅವರ ವರ್ಚಸ್ಸಿನ ಮೇಲೆ ಹೇರಿದರು. ಅರಿಸ್ಟೋಫೆನೀಸನಿಗೆ ಈ ಅಭಿಪ್ರಾಯವು ಒಪ್ಪಿಗೆಯಾದಂತೆ ತೋರುತ್ತದೆ.

ಯುರಿಪಿಡೀಸನು ಈ ಬುದ್ಧಿಪ್ರಧಾನ ಚಳವಳಿಗೆ 'ಸೊಫೋಕ್ಲಿಸನಿಗಿಂತ ಸಮೀಪವರ್ತಿ; 'ಮೀಡಿಯದೊಳಗಿನ ಹಲವಾರು ಭಾಷಣಗಳು ಇದನ್ನೇ ಸೂಚಿಸುತ್ತವೆ; ಕವಿಗಳೂ ಸಂಗೀತಕಾರರೂ, ಪ್ರಸ್ತದೂಟಕ್ಕೆ ಸೊಗಸುತರುವವರೇ ಹೊರತು ದುಃಖಕ್ಕೆ ನೆರವಾಗುವವರಲ್ಲ ಎಂದು ದಾಯಿ ಗೊಣಗುವಾಗ, ಮಕ್ಕಳಿರುವದು ಒಳ್ಳೆಯದೋ ಇಲ್ಲದಿರುವದು ಒಳ್ಳೆಯದೋ ಎಂದು ಮೇಳವು ಚರ್ಚೆಮಾಡುವಾಗ, ನಮಗೆ ನಾಟಕವನ್ನು ನೋಡುತ್ತಿದ್ದೇವೆಯೋ ಪ್ರಬಂಧವನ್ನು ಓದುತ್ತಿದ್ದೇವೆಯೋ ಎಂಬ ಸಂದೇಹ ಬಂದಿರಲಿಕ್ಕೆ ಸಾಕು; ಹಲವಾರು 'ಮೀಡಿಯ'ದ ಭಾಷಣಗಳು ನ್ಯಾಯಾಸ್ಥಾನವನ್ನು ನೆನಪಿಗೆ ತರುತ್ತವೆಯೇ ಹೊರತು ರಂಗಭೂಮಿಯನ್ನಲ್ಲ. ಇದಲ್ಲದೆ, ಅವನ ಕೆಲವು ಕೊನೆಕೊನೆಯ ನಾಟಕಗಳು ಮಹತ್ತಮ ರುದ್ರನಾಟಕ ಏಕೆ ಬದುಕಲಿಲ್ಲವೆಂಬುದನ್ನು ಸೂಚಿಸುತ್ತವೆ. ಅವುಗಳು ಜೀವನದ ಗಂಭೀರ ಸಮಸ್ಯೆಗಳನ್ನು ಕುರಿತಾಗಿ ನೇರವಾಗಿ ಬರೆಯಲ್ಪಟ್ಟಿಲ್ಲ; ಇಂಥ ಸಮಸ್ಯೆಗಳು 'ತತ್ವಜ್ಞಾನಿಗಳ ಸೊತ್ತು' ಎಂಬ ಭಾವನೆಯಿಂದಲೋ ಏನೋ! ಅದರ ಬದಲಾಗಿ ಇವು ಲಲಿತತೆ ವಿದಗ್ಧತೆಗಳಿಂದ ಕೂಡಿದ ಪ್ರಯೋಗಗಳಾಗಿ ಚಿಕ್ಕಪುಟ್ಟ ವಿಷಯಗಳ ಬಗ್ಗೆ ಚರ್ಚೆಯನ್ನೋ ವಿವಾದವನ್ನೋ ಎನೆಗುತ್ತವೆ. ತತ್ಪರಿಣಾಮವಾಗಿ ನಾಟಕದ ನಾಟ್ಯಶೈಲಿ ಹಾಗು ಕಾವ್ಯಶೈಲಿಗಳಲ್ಲಿ ತಕ್ಕ ಬದಲಾವಣೆಗಳಾಗಬೇಕಾಯಿತು. ಭಾವನೆ ವಿಚಾರಗಳ ತೀವ್ರತೆಯ ಮೂಲಕ ಈಸ್ಕಿಲಸ್ ಸೊಫೊಕ್ಲೀಸರ ಕಾಲವು ಮುಟ್ಟಿದ್ದ ಮಹೋನ್ನತಿಯು ಇವನಲ್ಲಿ ಮಾಯವಾಗಿದೆ. ಅದರ ಬದಲು ಲಾಲಿತ್ಯ ಸ್ಪಷ್ಟತೆ ಸುಗಮತೆಗಳು ಹೊಸ ಆದರ್ಶಗಳಾಗಿವೆ.

ಇದೇ ಹಿನ್ನೆಲೆಯಲ್ಲಿ ಅರಿಸ್ಟೋಫೆನೀಸನ ಚತುರ ಲಲಿತ ನಾಟಕವಾದ 'ಕಪ್ಪೆಗಳು' ಬರೆಯಲ್ಪಟ್ಟಿತು. ಇದು ಯುರಿಪಿಡೀಸ್ ಹಾಗು ಸೊಫೊಕ್ಲೀಸರ ಮರಣದ ಒಂದು ವರುಷದ ಮೇಲೆ, ಅಂದರೆ ಕ್ರಿ.ಪೂ. 405 ರಲ್ಲಿ ಪ್ರಯೋಗಕ್ಕೆ ಬಂದಿತು. ನಾಟಕದ ಕಥೆಯನ್ನು ನಾಟಕವೇ ಸ್ಪಷ್ಟಗೊಳಿಸುತ್ತದೆ. ಹಳೆತರದ ಹಾಸ್ಯನಾಟಕಗಳ ಲಕ್ಷಣಗಳಾದ ಅಮಿತ ಉತ್ಸಾಹ ಹಾಗು ಅಮಿತ ಕಲ್ಪಕತೆ ಇವುಗಳಿಗೆ ಇದು ಒಳ್ಳೆಯ

ಉದಾಹರಣೆಯಾಗಿದೆ. ಒಳಹುದುಗಿದ ವಿಚಾರಪರತೆಯೂ ಉಂಟು. ಅಥೆನ್ಸಿಗಾಗಿ ಕವಿಯಲ್ಲಿದ್ದ ಕಳವಳ, ಅಡಗಿದ ಪ್ರಾಚೀನ ಆದರ್ಶಗಳನ್ನು ಅಥೆನ್ಸ ಮತ್ತೆ ಅಂಗೀಕರಿಸಬೇಕೆಂಬ ಲವಲವಿಕೆ, ಇವು ನಾಟಕದಲ್ಲಿ ಅನುಭವಕ್ಕೆ ಬಾರದೆ ಇರವು. ದೇವತೆಗಳ ಹಾಸ್ಯಪರ ಚಿತ್ರಣವು ವಿಶಿಷ್ಟವಾದದ್ದು, ಅನೇಕ ಸಾಹಸಗಳನ್ನು ಮಾಡಿ ಮೃತ್ಯು ಲೋಕವನ್ನು ಜೀವಂತ ಪ್ರವೇಶಿಸಿ ಅನೇಕ ದಂತಕಥೆಗಳ ನಾಯಕನೆಂದಾಗಿ ಹೆಸರಾಗಿದ್ದ ವೀರ ಹಿರಾಕ್ಲೀಸನು ಇಲ್ಲಿ ಗುರುತೇ ಸಿಗದಂತಾಗಿದ್ದಾನೆ. ಯಾವ ದೇವತೆಯ ಸನ್ಮಾನಕ್ಕಾಗಿ ಈ ನಾಟಕದ ಪ್ರಯೋಗವು ನಡೆದಿದೆಯೋ ಯಾವ ದೇವತೆಯ ಪೂಜಾರಿಯು ಪ್ರಯೋಗದಲ್ಲಿ ಸನ್ಮಾನ್ಯಸ್ಥಾನವನ್ನು ಅಲಂಕರಿಸಿರುವನೋ ಆ ಡಯೋನಿಸಸ್‌ನ ಚಿತ್ರಣವಂತೂ ಬಹಳೇ ವಿಲಕ್ಷಣವಾದದ್ದು. ಅವನು ಯುರಿಪಿಡೀಸನ ನಾಟಕಗಳ ಹುಂಬಹುರುಪಿನ ಪ್ರೇಕ್ಷಕನಂತೆ ತೋರಿಸಲ್ಪಟ್ಟಿದ್ದಾನೆ. ಕೊನೆಯದಾಗಿ ಅಣಕ ನ್ಯಾಯಾಸ್ಥಾನದ ದೃಶ್ಯದಲ್ಲಿ ಬರುವ ಸಾಹಿತ್ಯವಿಮರ್ಶೆ ಹರಿತವಾದದ್ದು; ಒಟ್ಟಿನಮೇಲೆ, ನಿಷ್ಪಕ್ಷಪಾತಿಯಾದದ್ದು. ರುದ್ರನಾಟಕದ ವಿಸ್ತಾರವಾದ ವಿಮರ್ಶೆಯು ಲೋಕಪ್ರಿಯ ಹಾಸ್ಯನಾಟಕದ ಮಹತ್ವದ ಭಾಗವಾಗಿಯೂ ಬಂದ ಸಂಗತಿ ಅಥೆನ್ಸಿನ ಪ್ರೇಕ್ಷಕವೃಂದದ ರಸಿಕತೆಯ ನಿದರ್ಶನ; ಅಥೆನ್ಸದ ಕವಿಗಳ ಸೌಭಾಗ್ಯ.

ಆ ನಂತರದ ಗ್ರೀಕ ನಾಟಕದ ಇತಿಹಾಸವನ್ನು ಚರ್ಚಿಸುವದು ಸುಲಭ. ಸ್ವಲ್ಪಕಾಲದಲ್ಲಿಯೇ ಪ್ರತಿಯೊಂದು ಗ್ರೀಕ ನಗರಕ್ಕೂ ತನ್ನದೇ ನಾಟ್ಯಶಾಲೆಯಾಯಿತು. ರುದ್ರನಾಟಕದ ಬಗ್ಗೆ ಅರಿಸ್ಟೋಫೆನೀಸ್‌ನು ಕೊಟ್ಟ ನಿರ್ಣಯವು ಸತ್ಯವೆನಿಸುವ ಕಾಲ ಬೇಗ ಬಂದೊದಗಿತು. ಕಾಲಾಂತರದಿಂದ ಅದು ಹೆಚ್ಚು ಹೆಚ್ಚು ನಿರ್ಜೀವಗೊಂಡು ನಾಟ್ಯಶಾಲೆಗಳು ಹಳೆಯ ಸಿದ್ಧನಾಟಕಗಳ ಪುನಃಪ್ರಯೋಗವನ್ನು ಅವಲಂಬಿಸಬೇಕಾಯಿತು. ಯುರಿಪಿಡೀಸನ ಪ್ರಯೋಗಗಳು ಹೆಚ್ಚು ಜನಪ್ರಿಯವಾದವು. ಹಾಸ್ಯಪರ ನಾಟಕ ಸತ್ವಶಾಲಿಯಾಗಿ ಬೆಳೆಯಿತು. ಆದರೆ, ಅದರ ಸ್ವರೂಪ ಬದಲಾಯಿತು. ಅದರ ರಾಜಕೀಯ ಅಂಗ ಲೋಪವಾಯಿತು. ಅದು ವ್ಯಕ್ತಿಗತ ಜೀವನದ ಮಿದುವಾದ ಪ್ರಯೋಗವಾಯಿತು. ಮೆನಾಂಡರನ 'ನವ್ಯ' ಹಾಸ್ಯ ಪ್ರಯೋಗಗಳಲ್ಲಿ ಹಾಸ್ಯವೆಂಬುದೇ ಕಡಿಮೆ: ಸುಕುಮಾರ ಪಾತ್ರಪರಿಪೋಷಣೆ, ನಕ್ಕುನಲಿಸುವ ಜೀವನದ ಕುರಿತಾದ ಚತುರ ಸುಭಾಷಿತಗಳು, ಕೊಡಗೂಸು—ಕಳೆದುಹೋದ ಮಕ್ಕಳು—ದುಂದುಗಾರ ತರುಣರು—ಇಂಥ ಪಾತ್ರಗಳನ್ನು ಕುರಿತ ಕಥಾವಸ್ತುಗಳು, ಹೀಗೆ ಮೆನಾಂಡರನ ಲಲಿತ ನಾಟಕಗಳು ಕಂಗೊಳಿಸುತ್ತವೆ. ಈ ಹರ್ಷನಾಟಕಗಳನ್ನೇ ಒಂದು ಶತಮಾನದ ನಂತರ ಪ್ಲಾಟಸ್ ಹಾಗು ಟೆರೆನ್ಸರು ರೋಮನ್ ರಂಗಕ್ಕೆ ಪರಿವರ್ತಿಸಿಕೊಂಡರು. ಅಲೆಗ್ಝಾಂಡರನು ಸಿಂಧೂನದಿಯ ವರೆಗೆ ಹೋದಾಗ ಅವನೊಡನೆ ಬಂದ ಗ್ರೀಕ ಸಂಸ್ಕೃತಿಯಲ್ಲಿ ಗ್ರೀಕ ನಾಟ್ಯರಂಗವೂ ಒಂದು ಮಹತ್ವದ ಅಂಗ. ಈ ನಾಟ್ಯರಂಗಗಳಲ್ಲಿ ಯಾವ ಪ್ರಯೋಗಗಳು ಆಗುತ್ತಿದ್ದವೆಂಬುದನ್ನು ನಾವು ನಿಶ್ಚಿತವಾಗಿ ಅರಿಯೆವು; ಕೆಲವೊಂದಾದರೂ ಶುದ್ಧ ಪ್ರಾಚೀನ ನಾಟಕಗಳು, ಕೆಲವು ಲಲಿತ ಪ್ರಯೋಗಗಳು ನಡೆದಿರಲಿಕ್ಕೆ ಸಾಕು. ಆದರೆ ಸಾಧಾರಣತಃ 'ನಕಲಿ' (Mime) ಎಂಬ ಚಿಕ್ಕ

ನಾಟಕೀಯ ಪ್ರವೇಶ, ಕೆಲವೊಂದು ನೃತ್ಯಗಳು, ಇವೇ ಹೆಚ್ಚೆಂದು ಹೇಳಬಹುದು. ಭಾರತೀಯ ನಾಟಕ ಸಂಪ್ರದಾಯದ ಮೇಲೆ ಗ್ರೀಕ ಸಂಪ್ರದಾಯದ ಪರಿಣಾಮ ವಾಗಿರುವದು ಸಂಭಾವ್ಯವೆಂದು ತೋರುವದಿಲ್ಲ. ಮೆಸೆಡೋನದ ಸೆಲ್ಯೂಕಸನು ಭಾರತದ ವಾಯುವ್ಯಭಾಗವನ್ನು ಆಳಿದ ಅಲ್ಪ ಸಮಯದಲ್ಲಿ ಕೆಲವು ಗ್ರೀಕ ನಾಟಕ ಗಳು ಭಾರತೀಯ ಭೂಮಿಯಮೇಲೆ ಆಡಲ್ಪಟ್ಟ ಸಂಭವವುಂಟು.

ಅನುವಾದ: ಎಸ್. ಆರ್. ನೊಕಾಶಿ

ಯುರಿಪಿಡೀಸ್ ಮಹಾಕವಿಯ

# ಮೀಡಿಯ

(ರುದ್ರನಾಟಕ)

[Rex Warner ಅವರ ಇಂಗ್ಲಿಷ್ ಅನುವಾದದ ಕನ್ನಡ ಭಾಷಾಂತರ]

# ಪಾತ್ರಗಳು

ಜೇಸನ್, ಅಯೋಲ್ಕಸ್‌ನಾಡ ರಾಜನಾದ ಏಸನ್ನನ ಮಗ,
ಮೀಡಿಯ, ಕಾಲ್ಕಿಸ್‌ನಾಡ ರಾಜಕುಮಾರಿ ಮತ್ತು ಜೇಸನ್ನನ ಹೆಂಡತಿ,
ಮೀಡಿಯ ಜೇಸನ್ನರ ಇಬ್ಬರು ಮಕ್ಕಳು,
ಕ್ರೀಯಾನ್, ಕಾರಿಂಥಿನ ರಾಜ,
ಐಜಿಯಸ್, ಅಥೆನ್ಸಿನ ರಾಜ,
ಮೀಡಿಯಳ ದಾದಿ,
ಮೀಡಿಯಳ ಮಕ್ಕಳ ಶಿಕ್ಷಕ,
ದೂತ, ಮತ್ತು
ಕಾರಿಂಥಿನ ಹೆಂಗಸರ ಮೇಳ.

# ಮೀಡಿಯ

[ಕಾರಿಂಥಿನಲ್ಲಿ ಮೀಡಿಯಳ ಮನೆಯ ಮುಂದೆ. ಮನೆಯಿಂದ ಮೀಡಿಯಳ ದಾದಿಯ ಪ್ರವೇಶ.]

ದಾದಿ— ನೀಲ ಸಿಂಪ್ಲೆಗೆಡೀಸಿಸಿಬ್ಬಂಡೆಗಳ ನಡುವೆ ಚಿಮ್ಮುತ್ತ ಬಂದ ಆರ್ಗೊ
ಕಾಲ್ಕಿಸ್ ನಾಡ ತಲುಪದೆಯೆ ಇದ್ದರಾಗಿತ್ತು.
ಇಲ್ಲವೆ, ಪೀಲಿಯಾಸನ ಹೆಸರಿನಲ್ಲಂದು ಹೊನ್ನತುಪ್ಪಟದ
ಹರಣಕ್ಕೆ ತೊಡಗಿದಪ್ರತಿಮ ವೀರರ ಕೈಗಳಿಗೆ
ಹುಟ್ಟುಗಳನೊದಗಿಸಲು ಪೀಲಿಯಾನ್ ವನದ ತೆರವಿನಲಿ
ಮುರಿದು ಬೀಳದಿದ್ದರಾಗಿತ್ತು ದೇವದಾರು!
ಆಗೆನ್ನೊಡತಿ ಮೀಡಿಯ ಜೇಸನನ ಮೇಲೆ ತನಗಿರುವ
ಪ್ರೇಮಭರದಿಂದ ಪ್ರಜ್ವಲಿಸುವೆದೆಯನು ಹೊತ್ತು ಆಯೋಲ್ಕಸ್ ನಾಡ
ಗೋಪುರಾವಳಿಯೆಡೆಗೆ ಬರುತಲಿರಲಿಲ್ಲ ಹಡಗನು ಹತ್ತಿ;
ಪೀಲಿಯಾಸನ ಕುಮಾರಿಯರನೊಪ್ಪಿಸಿ
ಕೊಲ್ಲಿಸುತ್ತಿರಲಿಲ್ಲ ಅವರ ಕೈಗಳಲಿ ಅವನ;
ತನ್ನ ಪತಿಸುತರೊಡನೆ ಇಂದವಳಿಲ್ಲಿ ಕಾರಿಂಥಿನಲ್ಲಿ
ನೆಲಸುತ್ತಲಿರಲಿಲ್ಲ. ದೇಶಭ್ರಷ್ಟಳಾದ ತನಗೆ
ನೆರಳಿತ್ತ ನಾಡ ಜನರಿಗೆ ಹರುಷವನ್ನಿತ್ತಳವಳು;
ಜೇಸನನಿಗೆಲ್ಲ ವಿಧಗಳಲಿ ನೆರವಾದಳು.
ಮಡದಿಯಾದವಳಿಂತು ಪತಿಯಿಂದ ಬೇರಾಗಿ ನಿಲ್ಲದಿರುವುದು
ಪರಮಸುಕೃತವಿದೀಗ, ಎಲ್ಲಕ್ಕು ಮಿಗಿಲು.
ಇಂದೊ! ದ್ವೇಷವೆ ಎಲ್ಲು. ಪ್ರೇಮಕ್ಕೆ ರೋಗ ಹಿಡಿದಿದೆ.
ನನ್ನೊಡತಿಯನು ತನ್ನ ಮಕ್ಕಳನು ತೊರೆದು ಜೇಸನ್
ರಾಜವಂಶದ ಮಡದಿಯೊಬ್ಬಳನು, ಈ ನಾಡ ದೊರೆ ಕ್ರೀಯಾನನ ಮಗಳನು
ತನ್ನ ಹಾಸುಗೆಯ ಗೆಳತಿಯಾಗಿಸಿಹನು. ಬಡ ಮೀಡಿಯಳೊ ಅವಗಣಿತಳು!
ಕದಲದಭಿವಚನದಲಿ ತಾವಿಬ್ಬರೂ ಅಂದು ಬಲಗೈಗಳನು ಕೂಡಿಸುತ್ತ
ಸಾರಿದ ಪರಸ್ಪರ ಪ್ರತಿಜ್ಞೆಯ ನೆನೆದು ದನಿಯೆತ್ತಿ ರೋದಿಸುವಳು;
ತಾನಿತ್ತ ಪ್ರೇಮಕ್ಕೆ ಪ್ರತಿಯಾಗಿ ಜೇಸನ್
ತನಗಿತ್ತುದನು ಕಾಣಿರೆಂದು ಕರೆಯುವಳು ದೇವತೆಗಳ;
ದಿನದ ಪ್ರತಿಕ್ಷಣವನೂ ಕಣ್ಣೀರ ಸುರಿಸುತ್ತ ಕಳೆದು

ಸಂಕಟಕೆ ತನ್ನ ತೆತ್ತು, ಅನ್ನವನು ತೊರೆದು ಮಲಗಿರುವಳು.
ಕಡೆಗಣ್ಣಿನಿಂದವನು ತನ್ನ ಕಾಣತೊಡಗಿದನೆಂದು ಅರಿವಾದ
ನಿಮಿಷದಿಂದಿಂತೆಯೇ ಇವಳ ಪಾಡು.
ಕಣ್ಣಲುಗದು, ಕದಲದಿದೆ ನೆಲಕಿಟ್ಟ ಮುಖ ;
ನೇಹದ ನುಡಿಗೆ ಇವಳು ಕಿವಿಗೊಡುವುದೊ !—ಬಂಡೆಯೆಂತಂತೆ,
ಉರುಬಿ ಬಹ ಕಡಲ ನೀರೆಂತಂತೆ, ಅದಕಿಂತ ಮೇಲಲ್ಲ.
ಒಂದೊಂದು ಸಲ ಮಾತ್ರ ತನ್ನ ಬಿಳಿಗೊರಲ ಹಿಂದಕೆ ನುಲಿವಳು ;
ಇಂದಿವಳ ಗೌರವವ ಕಳೆವ ಹಾದಿಯ ಬಿಡದೆ ಹಿಡಿದ ಈ ಗಂಡನೊಡನೆ
ಓಡಿ ಬಂದಂದು ತನ್ನಿಂದ ವಂಚಿತರಾದ ತನ್ನ ತಂದೆಯ ತನ್ನ ತವರ ನೆಲನ
ಹೆಸರೆತ್ತಿ ಕರೆಯುತ್ತ ತನ್ನೊಳಗೆ ಮುಲುಗುವಳು.
ತಾಯ್ನಾಡ ನೀಗಿಕೊಳ್ಳದೆ ಉಳಿಸಿಕೊಂಡವರ ಭಾಗ್ಯವನು
ತನ್ನ ಸಂಕಟದಿಂದ ಬಡವೆ ! ಅರಿತಿಹಳು.
ಬೆನ್ನ ತಿರುಗಿಹಳು ಮಕ್ಕಳ ಕಡೆಗೆ ; ಅವರನು
ನೋಡಲೂ ಒಲ್ಲದಿಹಳು.
ಎದೆಗುದಿಯಲಿವಳಾವುದೋ ಘೋರವನು ಬಗೆಯಬಹುದೆಂದು
ಅಂಜುವೆ ನಾನು. ತನಗೆಸಗಿದಪಚಾರವನು
ಎಂದಿಗೂ ಸಹಿಸಳಿವಳು.
ಬಲ್ಲೆನಿವಳನು ; ಇವಳಿಗಂಜುವೆನು : ಓ ಇವಳು ಖಡ್ಗವೊಂದನು ಮಸೆದು
ಅರಮನೆಯ ಶಯ್ಯಾಗಾರದತ್ತ ಕದ್ದು ನಡೆದು
ಎದೆಗೆ ತಿವಿಯಬಹುದು ; ಮುನ್ನಡೆದು
ದೊರೆಯನೂ ಹೊಸ ವರನನೂ ಕೊಂದು
ಹಿರಿ ವಿಪತ್ತನು ತನ್ನ ಮೇಲೆಳೆದುಕೊಳಬಹುದು.
ವಿಚಿತ್ರದ ಹೆಣ್ಣು ಇವಳು. ಇವಳ ಹಗೆಯಾಗಿ ಯಾರೂ
ಪಾರಾಗುವುದು ಸುಲಭವಲ್ಲವೆನುವುದನು ಬಲ್ಲೆ.
ಆಟವನು ಮುಗಿಸಿ ಬರುತಿವೆ ಮಕ್ಕಳಿದೊ ಬಳಿಗೆ,
ತಿಳಿಯದವರಿಗೆಂದೂ ತಮ್ಮ ತಾಯ ಕಾಡುವ ಕಷ್ಟ.
ಅದೂ ನಿಜವೆ, ಕೊರಗು ಮಕ್ಕಳ ರೂಢಿಯಲ್ಲ.

[ಬಲಗಡೆಯಿಂದ ಮೀಡಿಯಳ ಚಿಕ್ಕ ಮಕ್ಕಳಿಬ್ಬರ ಶಿಕ್ಷಕನಾದ ದಾಸನ ಪ್ರವೇಶ ; ಅವನ ಹಿಂದೆಯೇ ಮಕ್ಕಳು.]

ಶಿಕ್ಷಕ—ನನ್ನ ಒಡತಿಯ ಮನೆಯ ಮುದಿ ಗೊತ್ತಿನನುಚರಳೆ,
ನೀನೇಕೆ ಏಕಾಂಗಿ ಹೆಬ್ಬಾಗಿಲಿನ ಮುಂದೆ ನಿಂತು
ನಿನ್ನ ದುರ್ವಿಧಿಗೆ ಒಳಗೊಳಗೆ ಕುದಿಯುತ್ತಿರುವೆ ?
ತನ್ನ ಪಾಡಿಗೆ ಅವಳ ನೀ ಬಿಟ್ಟು ಬಂದಿಹುದು
ಮೀಡಿಯಳ ಇಷ್ಟವಿರಲಾರದು.

ದಾದಿ— ಓ ಮುತ್ತ್ರ, ಜೇಸನನ ಕಂದಗಳ ಪಾಲಕನೆ,
ಒಡೆಯನ ಅದೃಷ್ಟವೇ ಹಾರಿಹೋದಾಗ
ಸೇವಕಗೆ ಸಲುವ ದುಸ್ಸಹ ದುಃಖ ಅವನೆದೆಗೆ
ಹೋಗುವುದು. ಅಂತೆಯೇ ದುಃಖವೊಂದೆನ್ನನಾವರಿಸೆ,
ನಾನಿತ್ತ ಹೊರಬಂದು ಎನ್ನ ಒಡತಿಯ ವೆತೆಯ ನೆಲಬಾನ್ಗಳಿಗೆ ಅರುಹುವ
ಆಸೆ ಎನಗಾಯ್ತು, ನಾನರಿಯದಂತೆ.

ಶಿಕ್ಷಕ—ಆ ಹೆಣ್ಣ ಗೋಳ್ಕರೆ ಪಾಪ! ಮುಗಿಯಲಿಲ್ಲವೆ ಇನ್ನೂ?

ದಾದಿ— ಮುಗಿವೆ? ಮೊದಲು ಈಗಿನ್ನೂ. ಅವಳ ಕಂಬನಿಯಲರೆದಾರಿ ಸವೆದಿಲ್ಲ.

ಶಿಕ್ಷಕ—ಬಡವೆ ತಿಳಿಗೇಡಿ,—ನನ್ನ ಒಡತಿಯನಿಂತು ಹೆಸರಿತ್ತು ಕರೆಯಬಹುದಾಗೆ ನಾನು,—
ಬರಲಿರುವ ಹೆಚ್ಚು ಕಷ್ಟದ ಪರಿವೆಯೇ ಇವಳಿಗಿರದು!

ದಾದಿ— ಏನು? ಏನೆಂದೆ? ಓ ಮುತ್ತ್ರ? ಭಯವಿಲ್ಲ, ನುಡಿ ನೀನು.

ಶಿಕ್ಷಕ—ಏನಿಲ್ಲ. ಈಗ ನುಡಿದುದನೆಲ್ಲ ಹಿಂದಕ್ಕೆ ಕೊಳುವೆ.

ದಾದಿ— ನಿನ್ನ ಗಡ್ಡದ ಆಣೆ, ನಿನ್ನ ಜತೆಯಾಳಿಂದ ಮರೆಗೊಳಿಸಬೇಡ ನೀನಿದನು.
ಬೇಕಿತ್ತೆ, ನೀನೀಗ ನುಡಿವುದನು ಕೇಳಿಯೂ ಮೌನದಿಂದಿಹೆನು ನಾನು.

ಶಿಕ್ಷಕ—ಪವಿತ್ರ ಚಿಲುಮೆಯ ಬಳಿಯಲಿ ಪಗಡೆಯಾಡುತ ಕುಳಿತ ಹಳೆಮಂದಿಯೊಳಗೊಬ್ಬ
ನಾನವರ ಕಡೆಗೆ ಮನಗೊಡದಂತೆ ಅಡ್ಡಾಡುತಿರಲು
ರಾಜ ಕ್ರೀಯಾನ್ ಈ ತಾಯಿ ಮಕ್ಕಳನು ಗಡಿಪಾರುಮಾಡಿ
ಕಾರಿಂಥಿನಾಚೆಗಟ್ಟಬೇಕೆಂದಿರುವನೆಂದಂತೆ
ಬಿತ್ತೆನ್ನ ಕಿವಿಗೆ. ಆ ಮಾತು ದಿಟವೋ ಸಟೆಯೋ
ನಾನರಿಯೆ, ದಿಟವಾಗದಿರಲಿ ಅದು ಎನುವೆ ನಾನು.

ದಾದಿ— ಅವರ ತಾಯ್ ಅವಗೆ ಕೆಳೆಯಲ್ಲದಿರಲೇನು,
ತನ್ನ ಮಕ್ಕಳನಿಂತು ಕಷ್ಟಕ್ಕೆ ಒಡ್ಡಿದರೆ ಸುಮ್ಮನಿದ್ದಾನೆ ಜೇಸನ್?

ಶಿಕ್ಷಕ—ಹಳಕಟ್ಟು ಹೊಸತಕ್ಕೆ ಎಡೆಯ ನೀಡುವುದು;
ಜೇಸನನಿಗೆಮ್ಮ ಈ ಮನೆ ತನ್ನದಲ್ಲವಿನ್ನು.

ದಾದಿ— ಈ ದಿನದ ಬಾನ್ ಅಚ್ಚವಪ್ಪುದರ ಒಳಗಾಗಿ
ಹಳೆಯ ದುಃಖಕೆ ಹೊಸತ ಕೂಡಿಸುತ್ತಿರಲು,
ಕಾಳಿಮೆಯೆ ಪ್ರಾಪ್ತಿ ನಮಗೆ.

ಶಿಕ್ಷಕ—ಸುಮ್ಮನಿರು ನೀನು; ಇಟ್ಟುಕೋ ನಿನ್ನಲ್ಲೆ;
ನಮ್ಮೊಡತಿಗಿದನು ತಿಳಿಸುವ ವೇಳೆಯಲ್ಲವಿದು.

ದಾದಿ— ಕೇಳಿದಿರ ಮಕ್ಕಳಿರ! ನಿಮಗವನು ಎಂತಹ ತಂದೆ ಎನುವುದ?

ಸತ್ತಿದ್ದರವನು ಮೇಲಿತ್ತು,—ಅದು ಬೇಡ, ಅವನಿಂದಿಗೂ ಎನಗೆ ಒಡೆಯ—
ಇದು ಗಟ್ಟಿ: ತನ್ನ ಪ್ರೀತಿಯ ಜನಕೆ ಇವನು ಕರುಣೆಯಿರದವನೆಂಬ ಮಾತು.

ಶಿಕ್ಷಕ—ಅದರಾಶ್ಚರಿಯೇನು ? ಮೊದಲು ತಾನ್ ; ಬಳಿಕ ನೆರೆಹೊರೆ ! ನಿಜವೆ.
ಕೆಲವರಿಗೆ ಇದಕೆ ಒಳ್ಳೆಯದೆ ಕಾರಣವಿಹುದು ;
ಇತರರೋ ಇದರಿಂದ ಅದನಿದನು ಪಡೆಯುವರು.
ಹೊಸತೀಗ ಕಂಡೆಯಾ ನೀನು ! ಇವನು, ಜೇಸನ್
ನವವಧುವಿಗಾಗಿ ತನ್ನ ಮಕ್ಕಳನುಪೇಕ್ಷಿಸಿಹನು.

ದಾದಿ— ಮನೆಯೊಳಗೆ ಹೋಗಿ ಮಕ್ಕಳಿರ ; ಅದುವೆ ಉತ್ತಮ.
ಓ ಮುತ್ತ, ಅವರ ಬಳಿಗಿನ್ನಾರೂ ಬಾರದಂತೆ ಆದಷ್ಟು ನೋಡಿಕೊ ನೀನು.
ಕೋಪಾವಿಷ್ಟೆ ಅವರ ತಾಯ ಬಳಿಗಂತೂ ತಾರದಿರು ಮಕ್ಕಳನು.
ತನ್ನ ಮಕ್ಕಳ ಮೇಲೆ ಇವಳ ಕಣ್ ಉರಿಯುವುದನಾಗಲೇ ನಾನು
ಕಂಡಿಹೆನು,
ಯಾವುದೊ ಕೇಡನೆಳಸುವಳಿವಳು ಎಂಬಂತೆ.
ಯಾರನ್ನೊ ಬಡಿವನಕ
ತನ್ನ ರೋಷದ ರೊಚ್ಚ ನಿಲ್ಲಿಸಳು ಅವಳು.
ಹಗೆಯ ನೋಯಿಸಲವಳು, ಕೈಮಾಡದಿರಲಿ ನೇಹಿಗನ ಮೇಲೆ.

[ಮನೆಯೊಳಗೆ ಮೀಡಿಯಳ ಧ್ವನಿ ಕೇಳಿಬರುತ್ತದೆ.]

ಮೀಡಿಯ— ಹಾ, ಪಾಪಿ ! ಹಾ, ನನ್ನ ಸಂಕಟಗಳಲಿ ನಾಶಗೊಂಡು
ನಾ ಸತ್ತರಾದೀತು, ಆದೀತು !

ದಾದಿ— ನಾನು ಹೇಳಿದ್ದೇನು ನಿಮಗೆ, ಮುದ್ದು ಮಕ್ಕಳಿರ ! ನಿಮ್ಮ ತಾಯಿ
ಕೆರಳಿಸುತ್ತಿಹಳೆದೆಯ, ಮಸಗುತಿಹಳದನು ಕೋಪಕ್ಕೆ.
ಓಡಿ, ಬೇಗನೆ ಓಡಿ ಮನೆಯೊಳಕ್ಕೆ.
ಅವಳ ಕಣ್ಣಿಗೆ ದೂರವಿದ್ದು ಬಿಡಿ.
ಬಳಿಗೆಲ್ಲು ಹೋಗಲೇಬೇಡಿ, ಎಚ್ಚರದಲಿರಬೇಕು
ಆ ಗರ್ವಬುದ್ಧಿಯ
ಕಾಡುತನಕೆ, ಆ ಕಹಿ ಪ್ರಕೃತಿಯ ಬಗೆಗೆ.
ಹೋಗಿ ಈಗಲೆ ! ಓಡಿ ಬೇಗನೆ ಮನೆಯೊಳಕ್ಕೆ.
ಸ್ಪಷ್ಟವಿದು : ಇಷ್ಟರಲೆ ಸಿಡಿಲ ಮಡಗುವಳವಳು
ಬೆಳೆವ ಸಿಟ್ಟಿನಿಂದೇಳ್ವ ತನ್ನ ಕೂಗುಗಳ
ಮುಗಿಲಿನಲ್ಲಿ. ಓ ಏನ ಮಾಡುವಳೊ ಅವಳು,
ಗರ್ವದೆದೆಯವಳು, ತನ್ನ ಹಾದಿಗೆ ಅಡ್ಡಿ ಸಹಿಸದವಳು,
ಅನ್ಯಾಯ ಕಡಿದಿರುವ ಆತ್ಮದವಳು.

[ಶಿಕ್ಷಕ ಮಕ್ಕಳನ್ನು ಮನೆಯೊಳಕ್ಕೆ ಕರೆದುಕೊಂಡು ಹೋಗುತ್ತಾನೆ.]

ಮೀಡಿಯ— ಯಾವುದಕೆ ಕಹಿಯಳುವ ಕರೆಯಬೇಕಾಗಿದೆಯೊ
ಅದನು ಅನುಭವಿಸಿ ತಾಳಿಹೆನು. ಅಯ್ಯೊ! ದುಷ್ಕರ್ಮಿ ತಾಯ್ಗೆ
ನೀವು ಹಗೆ ಮಕ್ಕಳಿರ! ನಿಮ್ಮ ಮೇಲಿರಲೆನ್ನ ಶಾಪ,
ಅಂತೆಯೇ ನಿಮ್ಮ ತಂದೆಯ ಮೇಲೆ. ಮನೆಗೆ ಮನೆಯೇ ಮುರಿಯಲಿ!

ದಾದಿ— ಹಾ! ನಿನ್ನ ಮೇಲೆ ಕನಿಕರವೆನಗೆ, ಬಡಜೀವಿಯೆ!
ಪಿತನ ಕೇಡಿಗತನಕೆ ಮಕ್ಕಳೀ ನಿನ್ನವರು ಎಂತು ಭಾಗಿಗಳು?
ದ್ವೇಷವೇತಕೆ ನಿನಗೆ ಅವರ ಮೇಲೆ? ಓ ಮಕ್ಕಳಿರ,
ಎಷ್ಟು ಹೆದರುವೆನೊ ಮುಂದಿನ್ನು! ಮಹಾತ್ಮರ ಕೋಪವೇ
ಭಯಂಕರ; ಅವರಿಗವರದೆ ದಾರಿ; ಅದಕೆ ತಡೆ ಅಪರೂಪ;
ಈಗಿದ್ದ ಮನಸು ಇನ್ನೊಂದು ನಿಮಿಷಕ್ಕಿಲ್ಲ;
ಇಲ್ಲಿದೆ ಅಪಾಯ.
ತನ್ನ ನೆರೆಹೊರೆಯೊಡನೆ ಸಮತೆಯಲಿ ಬಾಳುವುದನಭ್ಯಾಸಮಾಡುವುದು
ಎಷ್ಟು ಮೇಲು!
ಸುರಕ್ಷಿತವಾಗಿ ಬಾಳಬಯಸಿ, ತಗ್ಗಿ ಮುಪ್ಪಾಗಲಾಶಿಸುವೆ ನಾನು.
ಮಿತವೆನುವುದೇ ಉತ್ತಮ, ನಡೆಯಲ್ಲಿಯೂ ಎಲ್ಲರಿಗೆ ಅದೇ ಉತ್ತಮ.
ಹಿರಿಮೆ ತಾರದು ಲಾಭವೇನನೂ ಜನಕೆ.
ದೇವರಿಗೆ ಕೋಪ ಬಂದಾಗ ಮುರಿಯುವನು
ಹೆಚ್ಚಾಗಿ ದೊಡ್ಡವರ ಮನೆಗಳನ್ನೇ.

[ಪ್ರವೇಶ, ಬಲಗಡೆಯಿಂದ ಕಾರಿಂಥಿನ ಮೇಳದ ಹೆಂಗಸರು. ಮೀಡಿಯಳ ಯೋಗಕ್ಷೇಮವನ್ನು ವಿಚಾರಿಸಲೂ, ಅವಳನ್ನು ಸಂತೈಸಲೂ ಅವರು ಬಂದಿದ್ದಾರೆ.]

ಮೇಳ— ಧ್ವನಿಯ ಕೇಳಿದೆ, ಅಳುವ ಕೇಳಿದೆ
ಕಾಲ್ಕಿಸಿನ ನಿರ್ಭಾಗ್ಯ ಮಗಳ.
ಶಾಂತಗೊಳಲಿಲ್ಲವೇನಿವಳು ಇನ್ನೂ?
ನುಡಿ, ತಾಯೆ. ರಾಜಸಭೆಯೊಳಗೆ
ಇಬ್ಬಾಗಿಲಿನ ಹಿಂದೆ ಕೇಳಿದೆನಿವಳ ಕೂಗ
ಈ ಮನೆಯ ದುಃಖಕ್ಕೆ ನೊಂದೆ;
ಓ, ಏನಾಯ್ತು, ಹೇಳು, ಹೇಳು.

ದಾದಿ— ಇನ್ನೆಲ್ಲಿಯ ಮನೆ! ಅದರ ಕತೆ ಮುಗಿದುದಾಗಲೆ.
ಅವಳ ಗಂಡನೊ! ರಾಜಘನತೆಯ ಮದುವೆಯನು ಹಿಡಿದು
ಬಲವಾಗಿ ನಿಂತಿಹನು, ನನ್ನೊಡತಿ ಇವಳೊ!
ತನ್ನ ಕೋಣೆಯ ಹಿಡಿದು ಕಣ್‌ಕಳೆವವರೆಗು ಅಳುತಿಹಳು,
ಯಾವ ಕೆಳೆಯೆಂಥ ನುಡಿಯಿಂದಲೂ ಕಾವ ಕೊಳದೆ.

ಮೀಡಿಯ— ಓ, ಬಾನ ಸಿಡಿಲಾದರೂ
ಬಿದ್ದು ಸೀಳದೆ ನನ್ನ ತಲೆಯನು!

ಓ ಬದುಕಿ ನನಗೀಗ ಯಾವ ಫಲವೊ!
ಸಾವಿನಲಿ ನನ್ನ ಬಿಡುಗಡೆಯ ಕಾಣುವೆ ನಾನು,
ಹೇಸಿಗೆಯ ಜೀವಿತವ ಬಿಡುವೆ ಹಿಂದೆ.

ಮೇಳ— ಓ ದೇವರೆ, ಭೂಮಿಯೆ, ಸ್ವರ್ಗವೆ!
ಕೇಳಿದಿರ ನೀವು ಈ ವೆತೆಯಲಿಹ ಮಡದಿಯ
ಅಳಲ ದನಿ ಗೀತವನು?
ಓ ಹೆಣ್ಣೆ, ಅರಿವಿಲ್ಲದಳೆ, ನೀನೇಕೆ ಬಯಸುತಿಹೆ
ಆ ಘೋರ ವಿಶ್ರಾಂತಿಗೆ?
ಓಡಿಬರುವುದು ಸಾವು ಕಡೆಯ ಮುಗಿವಾಗಿ;
ಅದು ಬರಲಿ ಎಂದು ಮೊರೆಯಿಡುವುದಿದು ಬೇಕಿಲ್ಲ.
ನಿನ್ನ ಕೈ ಹಿಡಿದವನು ಇನ್ನೊಬ್ಬಳಿಗೆ ಒಲಿದು
ಅವಳ ಹಾಸುಗೆಗೇಕೆ ಗೌರವವನೀವನೆನ್ನುವೆಯ?
ನಡೆವುದಿದು ಹಲವೇಳೆ, ನೋಯದಿರು ಅದಕೆ.
ದೈವ ಕೆಳೆಯಹುದು ಇದರಲ್ಲಿ ನಿನಗೆ.
ನಿನ್ನ ಹಾಸುಗೆಯ ಪಾಲ್ಗೊಂಡವನಿಗಾಗಿ
ಅತಿಯಾಗಿ ಹಂಬಲಿಸಿ ಕೃಶಳಹುದು ಸಲ್ಲದು.

ಮೀಡಿಯ— ಥೇಮಿಸ್ ಮಹಾದೇವಿ, ಸನ್ಮಾನ್ಯೆ ಆರ್ಟೆಮಿಸ್, ನೋಡು
ದ್ವೇಷಕರನಾದೆನ್ನ ಪತಿ ನನಗೆ ಹಿಂದೊಮ್ಮೆ ಅಭಿವಚನವಿತ್ತಿದ್ದರೂ
ನಾ ಪಡುವ ಕಷ್ಟವನು. ಅನುಗ್ರಹವಾಗಲೆನಗೆ
ಅವನು ಮತ್ತವನ ವಧು ರಾಜಮಂದಿರವೆಲ್ಲ
ಧ್ವಂಸವಪ್ಪುದ ನಾನು ಕಾಣುವಂತೆ,
ನೆರವಿಲ್ಲದೆನಗವರು ಅಪರಾಧಗೈಯುತಿಹ ದಿಟ್ಟತನಕಾಗಿ.
ಓ ನನ್ನ ತಂದೆ! ಓ ನನ್ನ ನಾಡೆ! ಎಂಥ ಅಪಮಾನದಲಿ
ತೊರೆದು ಬಂದೆ ನಿಮ್ಮನು, ಕೊಂದು ಸೋದರನನದಕಾಗಿ.

ದಾದಿ— ಕೇಳಿದಿರ ಅವಳ ಮಾತನು, ಅವಳಿಂತು ಕರೆವುದನು
ಅಭಿವಚನ ದೇವಿ ಥೇಮಿಸಳನು, ಪ್ರಮಾಣ ವಚನಗಳ
ರಕ್ಷಕನೆಂದು ನಾವು ನಂಬಿರುವ ಜ್ಯೂಸನನ್ನು?
ಇದು ಖಚಿತವೆನಗೆ. ತಣಿಸಲಾರದು ಸಣ್ಣದಾವುದೂ
ಎನ್ನೊಡತಿಯುಗ್ರಕೋಪವನು.

ಮೇಳ— ಅವಳು ಬರುವಳೆ ನಮ್ಮ ಇದಿರಿಗೆ.
ಕಿವಿಯನೀವಳೆ ನಮ್ಮ ನುಡಿಗೆ?
ಅವಳ ಆಗ್ರಹವಿಳಿಯಬಹುದು,
ಅವಳ ಕಲ್ಲೆದೆ ಸಡಿಲವಹುದು,
ನಮ್ಮ ನುಡಿಗಳನಾಲಿಸಿ.

ಕೆಳೆಯರಿಗೆ ಸಮಯದಲಿ ಸೆರವನು
ಇಲ್ಲ ಎನುವವಳಲ್ಲ ನಾನು,
ಹೋಗಿ ಕರೆ ನೀನವಳನು.
ಕರೆದು ತಾ ಬೇಗಿಲ್ಲಿಗೆ.
ಕರುಣೆಯಿಂದಲೆ ಮಾತನಾಡಿಸು.
ದುಃಖಭಾರದಿ ತನ್ನ ಮನೆಗೇ
ಕೇಡನವಳೇ ತರುವ ಮುನ್ನವೆ,
ಅವಳನೀಗಲೆ ಕರೆದು ತಾ,
ಯಾವುದೋ ಅತಿಯೆಡೆಗೆ ಸರಿವುದು
ತಾಪವಿದು, ಈ ಇವಳದು.

ದಾದಿ— ಇದೊ, ಅಂತೆ ಗೈವೆನು.
ನನ್ನೊಡತಿಯನು ಎಂತು ಗೆಲ್ಲುವೆನೊ?—ಸಂದೇಹವೆನಗೆ.
ನಿನ್ನ ಇಷ್ಟವ ಸಲಿಸಲೆಂದಾದರೂ ಹೋಗಿ ನೋಡುವೆನು;
ಮರಿಗೆ ಕಾವಲುಕುಳಿತ ಸಿಂಹಿಣಿಯು ಉರಿನೋಟವನೆ
ತನಗೆ ಸುದ್ದಿಯ ತರುವ ಆಳ್ಗಳ ಮೇಲೆ ಬೀರುವುದವಳು
ವಿಲಾಸದ ಕ್ರೀಡೆಗೋ, ಊಟ ಔತಣಗಳಿಗೊ
ಸುಖಿಪುರುಷರಿಗೆ ಇನಿಸರದಲಿ
ಹಾಡುಗಳ ಬರೆದ ಹಳಮೆಯ ಕವಿಗಳನ್ನು
ದಡ್ಡರು ಮುಂಗಾಣ್ಕೆಯಿಲ್ಲದವರೆಂದು ತಿಳಿವುದು
ಸೈಯೆನಿಸುವುದು ನನಗೆ. ಅವರೊಟ್ಟನೊಳಗೊಬ್ಬನೂ
ಸಾವೊ ಆಪತ್ತೊ, ಬಾಳುವ ಮನೆಯ ಭರವಸೆಯನೆಲ್ಲ
ಹುಸಿಗೈವ ದುಃಖ—ದುಸ್ಸಹ ದುಃಖವನು ತನ್ನ
ಮಧುರ ಗಾಯನದಿಂದ ವಾದ್ಯಪರಿಕರದಿಂದ
ಕೊನೆಗಾಣಿಸುವ ಪರಿಯ ಕಂಡುಹಿಡಿದಿಲ್ಲ!
ಮದ್ದಿತ್ತೆ, ಜನಕೆ ಸಂಗೀತದಲಿ ಇದಕೆ, ಒಳ್ಳೆಯದಿತ್ತು!
ಗುರಿಯಿರದೆ ಬರಿದನಿಯನೆತ್ತಲೇಕೌತಣಕೂಟವೊಂದರಲಿ?
ಅಲ್ಲಿ ಇಹುದಲ್ಲ ಆಗಲೆ ತನ್ನದೇ ಸಂತಸದ ಬಿನದ
ಪುಷ್ಕಳವಾಗಿ, ಮಂದಿಗೆ!

[ದಾದಿ ಮನೆಯೊಳಕ್ಕೆ ಹೋಗುತ್ತಾಳೆ.]

ಮೇಳ— ದುಃಖ ತುಂಬಿದಾಕ್ರಂದನವೆನ್ನ ಕಿವಿಗೆ ಬಿದ್ದಿತು.
ತನ್ನೊಸಗೆಯ ಹಾಸುಗೆಗೆ ದ್ರೋಹವೆಸಗಿದವನ ಮೇಲೆ
ತನ್ನ ಕಠಿನ ದುಃಖವದನು ಬಸಿದು ಕಿರಿಚುತಿರುವಳು.
ದುಗುಡಹೊತ್ತು ಉಪ್ಪುಕಡಲ್ ಕೂಟಗಳನು ದಾಟಿಸಿ
ಮೇರೆಯಿಲ್ಲದಿರುವ ಉಪ್ಪುಕಡಲ ಮಹಾದ್ವಾರಕೆ

ಗ್ರೀಕರಿರುವ ಇದಿರ ಕರೆಗೆ ತನ್ನನಿತ್ತ, ಕರೆದು ತಂದ
ವಚನ ಮಲಿನವಾಯಿತೆಂದು
ದೇವತೆಗಳ ಕರೆವಳು ;
ತನಗೆ ಸಂದ ಅಪಚಾರವ ಧರ್ಮಪ್ರಭು ಸ್ಟ್ಯೂಸನಿಗೆ
ಅರಿಕೆಮಾಡುತಿರುವಳು.

[ವಿಂಡಿಯ ತನ್ನ ಸೇವಕರೊಂದಿಗೆ ಹೊರಗೆ ಬರುತ್ತಾಳೆ.]

ವಿಂಡಿಯ— ಕಾರಿಂಥಿನ ಮಹಿಳೆಯರೆ, ಹೊರಗೆ ಬಂದೆನಿದೊ, ನಿಮಗಾಗಿ,
ನೀವೆನ್ನ ಮೇಲೆ ಸಿಟ್ಟಾಗದಿರಲೆಂದು. ತಿಳಿದಿದೆ ನನಗೆ
ಒಬ್ಬರೇ ಇದ್ದಾಗ ಕೆಲವರಿಗೆ, ಸಂಗಡಿಗರಿದ್ದಾಗ ಇನ್ನು ಕೆಲವರಿಗೆ—
ಹಲವರಿಗೆ ಬಲು ಜಂಬ. ನನ್ನಂತೆ ಸದ್ದುಮಾಡದೆ ಬಾಳುವವರು
ಕೆಟ್ಟ ಹೆಸರನು ಪಡೆವರು. ಯಾರೊಬ್ಬನೂ ಮೊದಲ ನೋಟದಲೆ
ಇನ್ನೊಬ್ಬರನು—ಅವರ ಗುಣವರಿವ ಮುನ್ನ—ತನಗೇನು ಕೆಡುಕಾಗದಿರಲಿ—
ದ್ವೇಷಿಸುವ ಸಮಯದಲಿ, ನ್ಯಾಯದ ಹೊಳಪು ಕಂಗಳಲಿ ಕಂಡುಬರದು.
ಹೊಂದಿಕೊಳ್ಳಲೆಬೇಕು ತಾ ಬಂದ ನಾಡ ರೀತಿಗೆ ಬೇರೆ ನಾಡವರಾದರೆ.
ಹೆಮ್ಮೆಯಲೊ ತನ್ನ ದುರ್ನಡತೆಯಲೊ ನೆರೆಗೆ ಅಪಚಾರವೆಸಗುವವನ—
ಸೋದರ ಪ್ರಜೆಯೆ ಆಗಿರಲಿ ಅವನು—ಮೆಚ್ಚೆ ನಾನು.
ಆದರೆರಗಿಹುದೆನ್ನ ಮೇಲೆ ಈ ದುಃಖ ಮುಂದಾಗಿ ಸುಳಿವ ಕೊಡದೆ ;
ನನ್ನೆದೆಯನೊಡೆದಿಹುದು, ನನ್ನ ಕತೆ ಮುಗಿಯಿತು, ನನ್ನ ಬಾಳಿನ
ಸಂತೋಷವೆಲ್ಲ
ಮಣ್ಣುಗೂಡಿತು. ನನ್ನ ಗೆಳತಿಯರೆ, ಸಾವೊಂದೆ ಬೇಕು ನನಗೆ.
ಪುರುಷನೊಬ್ಬನ ಒಳಿತ ನೆನೆವುದೇ ಸರ್ವಸ್ವವಾಗಿತ್ತು ನನಗೆ.
ಈಗವನು, ನನ್ನ ಪತಿ, ಕೀಳ್ನಡೆಯ ಹಿಡಿದಿಹನು.
ವಿವೇಚನೆಯ ಬಲವುಳ್ಳ ಸಕಲ ಜೀವಂತ ಪ್ರಾಣಿಗಳಲಿ
ಹೆಂಗಸರು, ನಾವು ಅತ್ಯಂತ ನಿರ್ಭಾಗ್ಯರು :
ಮೊದಲು, ಹೆಚ್ಚಿನೈಸಿರಿಯಿಂದ ಗಂಡನೊಬ್ಬನನು ನಾವು
ಕೊಳ್ಳಲೇ ಬೇಕಿಹುದು ; ನಮ್ಮ ದೇಹಗಳಿಗೊಬ್ಬ ಯಜಮಾನನ
ಕೊಳ್ಳಲೇ ಬೇಕಿಹುದು—ನಿಯಮವಿದು.
ಒಬ್ಬನನು ಕೊಳದಿರಲು ಇನ್ನಷ್ಟು ಕೆಡುಕು.
ಕೊಳ್ಳುವುದು ಒಳ್ಳಿಯವನನೊ, ಇಲ್ಲ, ಕೆಟ್ಟವನನೋ ?—
ಎಂಬ ಇಂದಿನ ಪ್ರಶ್ನೆ ಗಂಭೀರ. ಹೆಂಗಸಿಗೆ ಇಲ್ಲ
ಸುಲಭದ ಬಿಡುಗಡೆ. ಮದುವೆಯನೊಲ್ಲೆನೆನುವಂತಿಲ್ಲ ;
ಹೊಸ ಚರ್ಯೆ ನಡತೆಗಳ ನೆಲೆಯು ಸೇರುವಳು.
ಅವಳಿಗಿರಬೇಕು ಪ್ರವಾದಿಶಕ್ತಿ ; ಇಲ್ಲವೆ, ತನ್ನ ತವರಲಿದ್ದಾಗಲೇ
ಕಲಿತಿರಬೇಕವಳು ತನ್ನ ಹಾಸುಗೆಯ ಪಾಲುಗಾರನನು

ಮೇಲಾಗಿ ನಿರ್ವಹಿಸಬಲ್ಲ ಯುಕ್ತಿಯನು.
ನಾವಿದೆಲ್ಲವನು ಎಚ್ಚರದಿಂದ ಚೆನ್ನುಪಡಿಸಿದೆವೆ,
ಗಂಡು ನಮ್ಮೊಡನೆ ಬಾಳುವನೆ ತನ್ನ ನೊಗವನು ಹಗುರತಾಳಿ
ಆಗ ಬಾಳ್ ಕರುಬುವಂತಹುದು. ಬಾಳು ಅಂತಿರದಾಗ
–ಹಿಂದೆಗೆಯೆ ಸಾಯೆ ನಾನು.
ತನ್ನ ಮನೆ ಸಂಸಾರದಲ್ಲಿ ದಣಿವಾಯ್ತೊ ಗಂಡಸಿಗೆ,
ಮನೆಯ ಬಿಡುವನು, ತನ್ನ ಬೇಸರವ ನೀಗುವನು
ಸಮವಯಸ್ಸಿನ ಸಖನನೋ, ಸಂಗವನೊ ಸೇರಿ.
ನಮಗಾದರೋ ಒಂದೆ ಗಂಡಿನ ಮೇಲೆ ಕಣ್ಣಿನಿಡಬೇಕೆಂಬ ನಿಯಮ.
ಕಾಳಗದ ಕಳದಲ್ಲಿ ಹೋರಾಡುತಿರಲವರು,
ಮನೆಯೊಳಗೆ ಹಾಯಾಗಿ ಇರುವವರು ನಾವೆಂದು
ನಮ್ಮ ವಿಷಯದಲವರ ಮಾತು. ಎಷ್ಟವರ ತಪ್ಪು!
ಮಗುವೊಂದ ಹೆರುವ ಬದಲು
ಯುದ್ಧಮುಖದಲಿ ನಾನು ನಿಂತೇನು ಮೂರು ಸಲ.
ನನಗಾವುದನ್ವಯವೊ ನಿಮಗದನ್ವಯವಲ್ಲ.
ನಿಮಗೊಂದು ದೇಶವಿದೆ. ನಿಮ್ಮ ಸಂಸಾರದ ವಸತಿ ಇಲ್ಲಿದೆ.
ನಿಮ್ಮ ಕೆಳೆಯರ ನಡುವೆ ಬಾಳ ಸುಖವಿದೆ ನಿಮಗೆ.
ನಾನೊ ಗಂಡಬಿಟ್ಟವಳು, ನಿರಾಶ್ರಿತೆ, ಗಂಡನೆಣಿಕೆಯಲಿ ಕಸ,—
ಪರನಾಡಿನಲ್ಲವನು ಗೆದ್ದ ಯಾವುದೊ ವಸ್ತು.
ಈ ಆಳಲ ಕಡಲಿನಲಿ ನನಗೆ ಆಸರೆಗೊಡುವ
ತಾಯಿ, ಸೋದರ, ಬಂಧು ಇಲ್ಲವಾರೂ.
ಅದಕಾಗಿ ನಿಮ್ಮ ಬಳಿ ನನ್ನ ಬೇಡಿಕೆ ಇಷ್ಟು; ನಡಸಿಕೊಡಿ ನೀವು ಅದನು :
ನನ್ನ ಪತಿ ನನಗೆಸಗಿದೆಲ್ಲವನು ನಾನವನಿಗೆ
ಅವನ ಮಾವನಿಗೆ ಅವ ಮದುವೆನಿಂತಾ ಹೆಣ್ಣಿಗೆ
ತಿರುಗಿಸುವ ತಂತ್ರವನು ಅಣಿಗೊಳಿಸಲೊ ಸಾಧನವ ಹುಡುಕಲೊ
ಬಲ್ಲೆನಾದರೆ, ಬಾಯ್ಬಿಡದೆ ಮಾತ್ರ ನೀವಿರಲುಬೇಕು.
ಬೇರೆ ಸಂದರ್ಭಗಳಲಿ ಹೆಣ್ಣು ಹೆದರುವಳು ; ಅರಕ್ಷಿತೆ ; ಬೆಚ್ಚುವಳು
ನಿಷ್ಕರುಣ ಖಡ್ಗವನು ಕಂಡು. ತನ್ನ ಪ್ರೇಮಸಂದರ್ಭದಲಿ
ತನಗೊಮ್ಮೆ ದ್ರೋಹವೆರಗಲು, ಅವಳ ತಲೆಯೊಳಗಲೆವ
ರಕ್ತ ಕಲ್ಪನೆಯ ಹಲವಾರು ಬಗೆಗಳನು
ತಾಳಲಾರದು ಬೇರೆ ಬದುಕು.

ಮೇಳ— ನಿನ್ನ ಬೇಡಿಕೆಯಂತೆ ನಡೆಯುವೆನು, ಮೀಡಿಯ,
ಪತಿಗೆ ತಕ್ಕುದ ತಿರುಗಿ ಗೈವಂದು ನೀನು
ಸರಿಯನೇ ಗೈವೆಯಹುದು. ಅಚ್ಚರಿಯಿಲ್ಲವೆನಗೆ

ನಿನ್ನ ವೆತೆಯನು ಕಂಡು. ಅದರದೊ! ನೋಡಲ್ಲಿ, ನಮ್ಮ ದೊರೆ ಕ್ರೀಯಾನ್
ಇತ್ತ ಬರುತಿಹನು. ನಮಗೊಂದು ಹೊಸ ಹಂಚಿಕೆಯನಾವುದನೊ
ತಿಳಿಸಲಿಹನು.

[ಬಲಗಡೆಯಿಂದ ಭೃತ್ಯರೊಂದಿಗೆ ಕ್ರೀಯಾನನ ಪ್ರವೇಶ.]

ಕ್ರೀಯಾನ್—ಪತಿಗಿದಿರುಬಿದ್ದ ಕೋಪದೃಷ್ಟಿಯವಳೆ, ಮೀಡಿಯ, ನೀನು
ದೇಶಭ್ರಷ್ಟಳಾಗು, ನನ್ನ ಗಡಿಗಳ ಬಿಟ್ಟು ನಿನ್ನ
ಮಕ್ಕಳಿಬ್ಬರನು ನಿನ್ನೊಡನೆ ಕೊಂಡು ಹೊರಡು
ಈ ಕ್ಷಣವೆ. ನನ್ನದಿದು ಆಜ್ಞೆ, ಸಲ್ಲದು ವಿಳಂಬ.
ನನ್ನದೀ ತೀರ್ಪು. ಇದು ಆಗುವುದ ನಾ ನೋಡಿಕೊಳುವೆ.
ಈ ನನ್ನ ನಾಡ ಗಡಿಗಳ ಆಚೆ ನಿನ್ನ ದಾಟಿಸುವ ತನಕ
ಹಿಂದಿರುಗೆ ಮನೆಗೆ ನಾನು.

ಮೀಡಿಯ— ಓ ಇದುವೆ ಕೊನೆ ನನಗೆ. ನನ್ನ ಕಥೆ ತೀರ ಮುಗಿಯಿತು.
ದ್ವೇಷ ರುದ್ರಾನಿಲನ ತುಂಬು ಸೆಳೆವಿನಲಿಹೆನು.
ಈ ನಾಶದಿಂದ ತಪ್ಪಿಸಿಕೊಂಡು ಸುಲಭದಲಿ, ಸೇರಲೆನಗಿಲ್ಲ ಆಸರೆಯ
ನೆಲೆಯೇ.

ಅದು ಎಂತೆ ಇರಲಿ, ಪ್ರಶ್ನೆಯ ಕೇಳಿಬಿಡುವೆನು:
ಗಡಿಪಾರುಮಾಡಲೆನ್ನನು, ಕ್ರೀಯಾನ್, ನಿನ್ನ ಕಾರಣವೇನು ?

ಕ್ರೀಯಾನ್—ಹೆದರುವೆನು ನಿನಗೆ—ಇದನು ಮುಚ್ಚಿಡಲೇಕೆ ?—
ಹೆದರುವೆನು ನಿನ್ನಿಂದ ನನ್ನ ಮಗಳಿಗೆ ಪ್ರಾಣಾಪಾಯವೊದಗೀತು
ಎಂದು.

ಹಲ ಘಟನೆ ಪುಷ್ಟಿತಂದಿದೆ ನನ್ನ ಊಹನೆಗೆ.
ಉಪಾಯಗಾರಳು ನೀನು, ಕುಕಲಾಪ್ರವೀಣೆ.
ಗಂಡನೊಲವನು ಕಳೆದುಕೊಂಡ ಆಕ್ರೋಶವಿದೆ ನಿನಗೆ.
ನನ್ನ ಮಗಳಿಗೆ, ಜೇಸನನಿಗೆ, ನನಗೆಯೂ ಎಂಥುದನೊ
ಮಾಡಿಬಿಡುವೆನೆಂದು ನೀ ಬೆದರಿಸುತ್ತಿಹೆಯಂತೆ.
ನನಗದನು ಹೇಳಿದರು, ಕೇಳಿರುವೆ ನಾನದನು.
ನಾನು ಮುನ್ನೆಚ್ಚರಿಕೆಗೊಂಡಿಹೆನು ಮೊದಲೇ.
ಇನ್ನು ಹೇಳುವೆನು: ಮೊದಲು ಕನಿಕರತೋರಿ ಆ ಬಳಿಕ
ಕೊರಗುವುದಕಿಂತ

ನಿನ್ನ ದ್ವೇಷವನೀಗ ಗಳಿಸುವುದು ಲೇಸು ಎನಗೆ.

ಮೀಡಿಯ— ಇದು ಮೊದಲ ಸಲವಲ್ಲ, ಕ್ರೀಯಾನ್. ಹಿಂದೆ ಹಲವೇಳೆ
ಜಾಣೆಯೆನಿಸಿಕೊಂಡುದಕೆ ಅತಿಯಾಗಿ ನೊಂದಿಹೆನು
ತಿಳಿವಳಿಕೆಯುಳ್ಳವನು ತನ್ನ ಮಕ್ಕಳನೆಂದಿಗೂ
ಸಾಮಾನ್ಯಮಂದಿಗಿಂತಲು ಚತುರರಾಗುವಂತೆ

ಬೆಳಸಬಾರದು. ಅವರಿಗದರಿಂದ ಲಾಭವಿಲ್ಲ. ಅಲ್ಲದೆಯೆ,
ದ್ವೇಷ ಮಾತ್ಸರ್ಯಗಳಿಗೀಡಾಗುವರು ಅವರು.
ಹೊಸ ಕಾಣ್ಕೆಗಳನಿಡು ನೀನು ದಡ್ಡರ ಕಣ್ಗೆ, ತಿಳಿಯುವರವರು
ದಡ್ಡ, ನೀನಪ್ರಯೋಜಕ ಜತೆಗೆ, ಎಂದು.
ವಿದ್ವಾಂಸರೆಂದು ತುಸು ಹೆಸರಾದವರಿಗಿಂತ ಗಟ್ಟಿಗರು
ಎನಿಸಿಕೊಂಡಿರೊ, ಆಗ ಒಡಲುರಿ ನಿಮ್ಮ ಕಂಡರೆ.
ಇದು ನಡೆವ ಬಗೆಯನಿಷ್ಟಿಷ್ಟು ನಾ ಬಲ್ಲೆ ;
ಚತುರೆಯಾದುದಕಾಗಿ ಕರುಬುವರು ಕೆಲರೆನಗೆ, ಬಲ್ಲೆ ;
ಇತರರೆನಗೆ ವಿರೋಧ. ಅಷ್ಟು ಹಿರಿದಲ್ಲ
ನನ್ನೆಲ್ಲ ಚಾತುರ್ಯ.
ಸರಿಯೆ, ನಿನಗೆ ಹೆದರಿಕೆಯೇ, ಕ್ರೀಯಾನ್,
ನಾ ನಿನಗಪಾಯವನು ತಹೆನೆಂದು. ಅಗತ್ಯವಿಲ್ಲವದಕೆ. ನನ್ನ ಮಾರ್ಗವಲ್ಲ
ರಾಜನಧಿಕಾರವನು ಧಿಕ್ಕರಿಸಿ ನಡೆಯುವುದು. ನನಗೆ ನೀ-
ನಾವ ಬಗೆಯಲಿ ಕೇಡನೆಸಗಿರುವೆ? ನಿನ್ನ ಮಗಳನು
ನೀ ಕೊಟ್ಟೆ ನಿನಗೆ ಬೇಕಾದವಗೆ. ಓ ಇದು ನಿಜ,
ನನ್ನ ಪತಿಯನು ನಾನು ದ್ವೇಷಿಸುವುದು. ನಿನ್ನ ವರ್ತನೆಯೊ :
ವಿವೇಕಯುತವೆಂದೆ ನನ್ನೆಣಿಕೆ. ನಿನ್ನ ವ್ಯವಹಾರಗಳು
ಯಶಸ್ವಿಯೆನ್ನಲು ನನಗೆ ಕರುಬಿಲ್ಲ. ನೀನು
ಮಾಡಿರುವ ಮದುವೆ ಶುಭ ಕಾಣಲಿ. ನನ್ನನು ಮಾತ್ರ
ಈ ನಾಡಿನಲೆ ಇರಲುಗೊಡು. ನನಗೆ ಯಾರಿಂದ ಯಾವ
ಅನ್ಯಾಯವಾಗಿರಲಿ,
ಉಸಿರನೆತ್ತೆನು. ಬದಲು, ನನ್ನ ಹಿರಿಯರಿಗೆ
ಒಳಪಡಿಸುವೆನು ಅದನು.

ಕ್ರೀಯಾನ್—ನೀನು ಹೇಳುವುದೇನೊ ಸಾಕಷ್ಟು ಸೌಮ್ಯವೇ. ಆದರೂ ಎದೆಯೊಳಗೆ
ಅಪಾರ ಭಯವಿಹುದೆನಗೆ ನೀನಾವುದೋ ದುಷ್ಕೃತಿಗೆ
ಹೊಂಚುತಿಹೆಯೆಂದು.
ಅದಕಾಗಿ, ಮೊದಲೆ ನಿನ್ನನು ನಂಬದಿದ್ದವನು, ಈಗಂತು ನಂಬಲೇ ಆರೆ.
ನಾಲಗೆಯ ಬಿಗಿಹಿಡಿದ ಚತುರೆಗಿಂತ
ತಟ್ಟೆಂದು ಸಿಟ್ಟಿಗೇಳುವ ಹೆಣ್ಣಿನೊಡನೆ (ಇಲ್ಲವೋ ಗಂಡಿನೊಡನೆ)
ವ್ಯವಹರಿಸುವುದು ಸುಲಭ. ನಿನ್ನ ಬೇಡಿಕೆಗೆ
ಇಲ್ಲವೆನುವೆನು. ನೀ ಹೋಗಬೇಕು. ಹೆಚ್ಚು
ಭಾಷಣಕ್ಕಿನ್ನು ಎಡೆಯಿಲ್ಲ. ನಿರ್ಧಾರವಾಗಿಹುದು. ಏನೊಂದುಪಾಯ
ಹೂಡಿ
ನನ್ನ ಹಗೆ ನೀನು ಇನ್ನೆನ್ನ ನಾಡಿನಲಿ ಉಳಿಯಕೂಡದು.

ಮೀಡಿಯ— ಬೇಡಿಕೊಳುವೆನು, ನಿನ್ನ ಮೊಣಕಾಲ ಕಟ್ಟಿ! ಹೊಸ ಮದುವೆಗೊಂಡ ನಿನ್ನ ಮಗಳಾಣೆ!

ಕ್ರೀಯಾನ್—ನಿನ್ನ ನುಡಿಗಳು ವ್ಯರ್ಥ. ನೀನೆಂದಿಗೂ ನನ್ನ ಮನವ ತಿರುಗಿಸಲಾರೆ ನಿನ್ನ ಕಡೆಗೆ.

ಮೀಡಿಯ— ಓಡಿಸುವೆಯ ನನ್ನ, ನನ್ನ ಪ್ರಾರ್ಥನೆಗಳಿಗೆ ಗಮನವನೆ ಕೊಡದೆ?

ಕ್ರೀಯಾನ್—ಹೌದು, ಹಾಗೆಯೆ. ನಿನಗಿಂತ ನನ್ನ ಸಂಸಾರದಲೆ ಹೆಚ್ಚು ಪ್ರೀತಿ ನನಗೆ.

ಮೀಡಿಯ—ಓ ನನ್ನ ನಾಡೆ! ಇನ್ನೆಷ್ಟು ಸಂಕಟದಿಂದ ನಾ ನಿನ್ನ ನೆನೆವೆನೀಗ!

ಕ್ರೀಯಾನ್—ಪ್ರಿಯನೆನಗೆ ನನ್ನ ನಾಡೂ—ನನ್ನ ಮಕ್ಕಳದು ಮೊದಲು; ಆ ಬಳಿಕ ಅದು.

ಮೀಡಿಯ—ಓ ಪ್ರೇಮಭರವೆಂಥ ಕೇಡಿನದು ಮನುಜರಿಗೆ!

ಕ್ರೀಯಾನ್—ಅದನು ನಿರ್ಧರಿಸುವುದು ಅದರೊಡನೆ ಬರುವ ಅದೃಷ್ಟ.

ಮೀಡಿಯ— ದೇವರೆ! ಮರೆಯದಿರು ಇದಕೆ ಕಾರಣನನು.

ಕ್ರೀಯಾನ್—ಹೋಗು, ಫಲವಿಲ್ಲ. ನಿನ್ನನು ಬಲಾತ್ಕರಿಪ ನೋವನೆನಗಿಲ್ಲದೊಲು ಮಾಡು.

ಮೀಡಿಯ— ನನಗಾವ ನೋವನುಳಿಸಿದಿರಿ! ಬೇಡವೆನಗಿನ್ನು ವೆನೆ ಇನ್ನೆಷ್ಟು ನೋವು!

ಕ್ರೀಯಾನ್—ಹಾಗೊ? ಬಲಪ್ರಯೋಗದಲೆ ನನ್ನ ಆಳೊಬ್ಬ ನಿನ್ನನೊಯ್ಯುವನಾಚೆಗೆ.

ಮೀಡಿಯ— ಬೇಡ, ಕ್ರೀಯಾನ್, ಅದು ಬೇಡ; ಕಿವಿಗೊಡು ಇದಕೆ. ಬೇಡಿಕೊಳ್ಳುತಿಹೆನು.

ಕ್ರೀಯಾನ್—ಹೆಣ್ಣೆ, ತೋರುವುದಿನಿತೆ; ನಿನ್ನ ಹವಣಿಕೆಯ ಗುರಿ ಗದ್ದಲವನೆಬ್ಬಿಸುವುದು.

ಮೀಡಿಯ— ತೆರಳುವೆನು ನಿನ್ನ ನಾಡನು ಬಿಟ್ಟು. ಇದನಲ್ಲ ನಾನು ಬೇಡುವುದು.

ಕ್ರೀಯಾನ್—ಮತ್ತೆ ಈ ಗಡುಸೇಕೆ? ನನ್ನ ಕೈಗಂಟಿಕೊಳುವುದೇತಕೆ?

ಮೀಡಿಯ— ಈ ಒಂದು ದಿನ ಮಾತ್ರ ನನ್ನನುಳಿಯಗೊಡು ಇಲ್ಲಿ.
ಯೋಚಿಸಲು ಅವಕಾಶ ಬೇಕು, ಹೊರಸಾರಿ ಪರದೇಶಿಯಾಗಿ
ಬಾಳುವುದು ಎಲ್ಲೆಂಬುದನು,—ಅವರ ಪೋಷಣೆಗವರ ತಂದೆ
ಏರ್ಪಡಿಸದಿರುವಂದು—ನನ್ನ ಈ ಮಕ್ಕಳಿಗೆ
ಯಾರ ಬೆಂಬಲವ ದೊರಕಿಸಬೇಕು ಎಂಬುದನು.
ಮಕ್ಕಳಿವೆ ನಿನಗು; ಕನಿಕರವಿರಲಿ ಅವರ ಮೇಲೆ.
ನೀ ವಾತ್ಸಲ್ಯದಿಂದವರ ಕಾಣುವುದು ಸಹಜವೇ.
ಗಡಿದಾಟಿ ಹೋಗುವೆನು ನಾನೆಂಬ ಚಿಂತೆಯಿಲ್ಲವೆನಗೆ;
ಮಕ್ಕಳು ಸಿಕ್ಕುವರು ತೊಂದರೆಗೆಂಬುದೇ ಚಿಂತೆ ನನಗೆ.

ಕ್ರೀಯಾನ್—ನನ್ನ ಸ್ವಭಾವದಲಿ ನಿರಂಕುಶತೆಯೇನಿಲ್ಲ .
ದಯೆದೋರಿ ಹಲವು ಸಲ ನಾ ನಷ್ಟಗೊಂಡಿಹೆನು.
ತಪ್ಪನೇ ನಾನೀಗಲೂ ಮಾಡುತಿಹೆನೆಂದೆ ತಿಳಿದಿದೆ ನನಗೆ;
ತಥಾಸ್ತು, ನಿನ್ನ ಕೋರಿಕೆಗೆ. ಆದರೂ ಕೇಳು ಇದನು :
ಈ ನನ್ನ ರಾಜ್ಯದಲಿ ಎಲ್ಲಾದರೂ ನರಿಯೆ ನೀನು, ನಿನ್ನ ಮಕ್ಕಳು
ನಾಳೆ ಸೂರ್ಯನ ಕಣ್ಗೆ ಬಿದ್ದಿರೋ, ಸಾಯುವಿರಿ.
ಇದು ಗಟ್ಟಿಮಾತು. ನಿಲ್ಲಲೇಬೇಕೆ, ನಿಲ್ಲು, ಇದೊಂದು ದಿನ.
ಆ ಒಳಗೆ ನಾನು ಅಂಜುವುದನೇನನೂ ನೀ ಮಾಡಲಾರೆ, ಅದ ಬಲ್ಲೆ.

[ಕ್ರೀಯಾನ್ ತನ್ನ ಭೃತ್ಯರೊಂದಿಗೆ ನಿರ್ಗಮಿಸುತ್ತಾನೆ.]

ಮೇಳ— ಹಾ ! ದುರ್ದೈವಿಯೆ, ಹಾ ! ಕ್ರೂರತೆಯೆ.
ಎತ್ತ ತಿರುಗುವೆ ? ನಿನಗೆ ಯಾರ ನೆರವು ?
ನಿನ್ನ ಕಾಡುವ ಕೇಡ ತಡೆದು ಪೊರೆಯುವುದಾವ
ಮನೆ, ಯಾವ ನಾಡು ?
ದೇವತೆಯೊಬ್ಬ ಮುನಿದು ನಿನ್ನ ಮೇಲೆಸೆದಿಹನು, ಮೀಡಿಯ,
ನಿರಾಶೆಯೂರ್ಮಿಗಳಲೀ ಅಳಲನು.

ಮೀಡಿಯ— ಎಲ್ಲವೂ ಕೆಟ್ಟುಹೋಗಿವೆ ಎಲ್ಲ ವಿಧಗಳಲಿ; ಸಂಶಯವೆ ಇಲ್ಲ ಅದರೊಳಗೆ.
ಆದರಿವು ಮಿಂಚಿಹೋಗಿಲ್ಲ ; ಎಡೆಯಿಲ್ಲ ಅಂಥ ಭಾವನೆಗೆ.
ಹೊಸ-ಮದುವೆ-ಜೋಡಿಗೆ ಇವೆ ಕಷ್ಟಗಳು ಮುಂದೆ,
ಕಡೆಗಣಿಸಲಾಗದಿಹ ನೋವವರ ನಂಟರಿಗೆ.
ಸಾಧಿಸಲು ಗುರಿ, ಲಾಭವಾವುದೂ ನನಗಿಲ್ಲದೆ
ಆ ಗಂಡಸಿನ ಕಾಲಿಗೆಂದಾದರೂ ನಾನು
ಬೀಳುವವಳೆಂದು ತಿಳಿದಿರ ನೀವು ?—ಮಾತನೂ
ಆಡುತ್ತಲಿರಲಿಲ್ಲ, ಮುಟ್ಟುತಿರಲಿಲ್ಲ ನನ್ನ ಕೈಗಳಲವನನು.
ಆದರೀಗವನೆಂಥ ಹೆಡ್ಡತನದೆತ್ತರಕೆ ಹೋಗಿರುವನೆಂದರೆ,
ಗಡಿಪಾರುಮಾಡಿ ನನ್ನನು ನನ್ನ ತಂತ್ರವಾವುದೂ
ಫಲಿಸದಂತಾಗಿಸುವುದವನ ಕೈಯೊಳಗಿದ್ದರೂ, ಕೊಟ್ಟಿಹನು
ಇಲ್ಲುಳಿಯಲೀ ಒಂದು ದಿನವನೆನಗೆ. ಅಷ್ಟರಲಿ
ತಂದೆಯನು, ಹುಡುಗಿಯನು, ಜೊತೆಗೆನ್ನ ಗಂಡನನು—
ನನ್ನ ಹಗೆಗಳಲಿ ಈ ಮೂವರನು—ಹೆಣಮಾಡುವೆನು.
ನನ್ನಲಿವೆ ಹಲವು ದಾರಿಗಳು ಸಾವಿಗೆ; ನಾನು ಹೊಂದಿಸುವೆನೊಂದನ-
ವರಿಗೆ.
ತಿಳಿಯದಿದೆ, ನೇಹಿಗರೆ, ಯಾವೊಂದ ಹಿಡಿವುದೆನ್ನುವುದೆ—
ಅವರ ಮದುವೆಯ ಮನೆಯ ಬುಡಕೆ ಉರಿಯಿಕ್ಕುವುದೊ,

ಖಡ್ಗವನು ಮಸೆದು ಎದೆಗದನು ತಿವಿಯುವುದೊ
ಕದ್ದಿಳಿದು ಅರಮನೆಯ ಹಾಸುಗೆಗೆ? ಒಂದೇ ಒಂದು
ಅಡ್ಡಿಯಿಹುದಿದಕೆ. ಆ ಮನೆಗೆ ಕೇಡನು ತರುವ ಸಂಚಿನಿಂದ
ಕದ್ದು ಹೊಗುವಾಗಲ್ಲಿ ಸಿಕ್ಕಿಕೊಂಡೆನೊ, ಸತ್ತೆ.
ನನ್ನ ಹಗೆಗಳ ಮುಂದೆ ನಗೆಗೀಡು ನನ್ನ ಪಾಡು. ಅದಕಾಗಿ ನಾನು
ಎಲ್ಲೆನ್ನ ಕೈಚಳಕಕಿಲ್ಲವೋ ಸಾಟಿ ಆ ನೇರ ದಾರಿಯಲಿ
ನಡೆವುದುತ್ತಮ: ವಿಷವಿಕ್ಕಿ ಕೊಲ್ಲುವೆನವರನು.
ಹಾಗೆಯೇ ಆಗಿಹೋಗಲಿ!
ಅವರು ಸತ್ತರು, ಎನ್ನಿ; ಯಾವ ಪಟ್ಟಣವೆನಗೆ ಬಾಗಿಲನು
ತೆರೆಯುವುದು?
ಯಾವ ನೇಹಿಗನೆನಗೆ ಆಶ್ರಯವನೋ, ತನ್ನ ಮನೆಯಭಯವನೊ ನೀಡಿ
ಉಳಿಸುವನು ನನ್ನ ಜೀವವನು? ಯಾರನೂ ಕಾಣೆ.
ಕಾಯಬೇಕಿನ್ನಷ್ಟು ಕಾಲ ನಾನದಕಾಗಿ. ಆ ಬಳಿಕ ಯಾವುದಾಗಲಿ
ಸಿಕ್ಕಿದಾಗೆನ್ನ ಕಡೆಗಿರುವ ಕದಲದ ರಕ್ಷಣೆ,
ಈ ಕೊಲೆಗೆ ತೊಡಗುವೆನು ತಂತ್ರದಲಿ ಸದ್ದಿಲ್ಲದೆ.
ಅಂತಾಗದೆನ್ನ ವಿಧಿ ನೆರವುಗಾಣದ ನನ್ನನೆಳೆಯುತ್ತ ಹೋಯಿತೋ
ಆಗ ಸಾಯುವುದು ಖಂಡಿತವಾದರೂ, ನಾನು ಖಡ್ಗ ಹಿಡಿದು
ಕೊಲ್ಲುವೆನು, ದೃಢವಾಗಿ ನುಗ್ಗುವೆನು ದುಷ್ಕೃತ್ಯದೆಡೆಗೆ.
ನನ್ನ ಮನೆಯೊಲೆಯ ತೆರವಿನಲಿ ನೆಲೆಯುಳ್ಳವಳು,
ನನಗೆ ಅತಿ ಮಾನ್ಯೆ, ನನ್ನೆಲ್ಲ ವ್ಯವಹಾರದಲಿ ಪಾಲುಗಾರಿಕೆಗೆಂದು
ನಾನು ಆರಿಸಿದವಳು, ನನ್ನೊಡತಿ ಹೆಕಟೆಯಾಣೆಗು
ಗಂಡಸಾವನೂ ನನ್ನ ನೋಯಿಸುವುದು ತನಗೆ ಹರ್ಷವೆಂದು
ತಿಳಿಯುವಂತಾಗಕೂಡದು.
ಮಾಡುವೆನು ಅವರ ಪಾಲಿಗೆ ತಮ್ಮ ಮದುವೆಯೇ ಕಹಿಯಾಗಿ
ಗೋಳ್ ತುಂಬುವಂತೆ,
ಈ ನಂಟು, ಇಂತೆನ್ನ ನಾಡಾಚೆಗಟ್ಟುವುದು ಕಹಿ ಹಿಂಡುವಂತೆ.
ಆಹ, ಬಾ, ಮೀಡಿಯ, ನೀ ಬಲ್ಲ ನಿನ್ನ ತಂತ್ರಗಳು—ಒಳಸಂಚುಗಳು
ಯಾವುದನು ಹೂಡದೆಯೆ ಬಿಡಲು ಬೇಡ!
ನಡೆ ಮುಂದೆ ಘೋರಕೃತ್ಯಕ್ಕೆ. ಮನದ ನಿರ್ಧಾರಕ್ಕೆ
ಒದಗಿದೆ ಪರೀಕ್ಷೆ. ನಿನಗೀವ ಮನ್ನಣೆಯ ಕಾಣುತಿರುವೆ.
ಆದರೆ ಎಂದಿಗೂ
ಕಾರಿಂಥಿನಲಿ ನಡೆದ ಜೇಸನನ ಈ ಮದುವೆ ನಿನ್ನನಣಕಿಸಕೂಡದು.
ನಿನ್ನಯ್ಯ ಸನ್ಮಾನ್ಯ, ನಿನ್ನಜ್ಜ ಹೀಲಿಯೋಸ್. ತಂತ್ರಜ್ಞೆ ನೀನು.

ಎಗಿಲಾಗಿ, ಹುಟ್ಟಿರುವೆ ಹೆಣ್ಣಾಗಿ. ಹೆಂಗಸರು
ಸತ್ಕಾರ್ಯಸಾಧನೆಯಲತ್ಯಂತ ನಿಸ್ಸಹಾಯಕರೆ ಆದರೂ
ಯಾವ ಕೆಡುಕಿನ ಸಾಧನೆಯಲೂ ನಿಸ್ಸೀಮರು.

ಮೇಳ— ಪುಣ್ಯನದಿಗಳೆ, ಹುಟ್ಟಿದೆಡೆಗೆ ಹಿಂದಿರುಗಿಬಿಡಿ ;
ಲೋಕದ ಹಿರಿಯ ಪಾಳಿ ಹಿಂದುಮುಂದಾಗಲಿ.
ಪುರುಷರಾಲೋಚನೆಯೆ ವಂಚನೆಯದು ;
ಪೊಳ್ಳು ಅವರಿತ್ತ ಭಾಷೆ.
ಕತೆ ನನ್ನ ಜೀವಿತಕೆ ಒಳಿತನೆರೆಯುವುದೀಗ ;
ನಾರಿ ಪಡೆವಳು ತನಗೆ ಉಚಿತವಾದುದನು ;
ಕೆಟ್ಟ ಹೆಸರಿನ ಸದ್ದು ಇನ್ನವಳ ಕಾಡದು.
ಹಳೆಯ ಗಾಯಕರ ವಾಗ್ದೇವಿಯರೆ, ನಿಲ್ಲಲಿ ಇನ್ನು
ನನ್ನ ದುಶ್ಶೀಲವನೆ ನುಡಿಯುತ್ತ ಹೋಗುವುದು.
ಕಾವ್ಯರಚನೆಯ ದಿವ್ಯವರವನೇಕೋ ಫೀಬಸ್
ಕೊಡಲಿಲ್ಲವೆಮಗೆ, ಗಾನಾಧಿಪತಿ. ಕೊಟ್ಟಿದ್ದ-
ರುತ್ತರವ ಪುರುಷರಿಗೆ ಹಾಡಿ ಕೊಡಬಹುದಿತ್ತು.
ನಿಡುಗಾಲ, ಬೆಳೆದಂತೆ, ನುಡಿಯಲಿಹುದೆಷ್ಟೋ
ನಮ್ಮ ಕತೆಗಳ ಜತೆಗೆ ಅವರ ಕತೆಗಳನೂ.
ನೀನು ತಂದೆಯ ಮನೆಯ ತೊರೆದೆ ; ಹಡಗನು ಹತ್ತಿ
ಎದೆಯುರಿಯ ಹೊತ್ತು ಕಡಲನು ದಾಟಿದೆ,
ಇಬ್ಬಂಡೆಗಳ ನಡುವೆ ಸಾರಿ.
ಇಂದು ಪರನಾಡಿನಲಿ
ಪತಿಹೀನ ತಲ್ಪದಲಿ ನಿದ್ದೆಗೆಟ್ಟು
ನೊಂದ ನಿನ್ನನು ನಿರಾಶ್ರಿತೆಯಂತೆ ಕಂಡು
ಅಪಮಾನಗೊಳಿಸಿ ಅಟ್ಟುವರಾಚೆಗೆ.
ಹೋಗಿಹುದು ಸದ್ಭಾವ, ಉಳಿದಿಲ್ಲ ನಾಚಿಕೆ
ಹಿರಿಯ ನಾಡಾದ ಗ್ರೀಸಿನಲಿ.
ಹಾರಿತದು ಎಲ್ಲಿಗೋ ಬಾನ ಕಡೆಗೆ.
ನಿನಗಿಲ್ಲ ಬಾ ಎನುವ ತವರಾಸರೆ
ಈಗ ಹತ್ತಿರದಲ್ಲಿ, ಕಸಿದಿಹಳು ಬೇರೊಬ್ಬ ರಾಣಿ
ನಿನ್ನಿಂದ ನಿನ್ನ ಹಾಸುಗೆಯನು ;
ಯಜಮಾನಿ ನಿನ್ನ ಮನೆಗವಳು.

[ಸೇವಕರೊಂದಿಗೆ ಜೇಸನ್ನನ ಪ್ರವೇಶ.]

ಜೇಸನ್— ಮೊಂಡುಬುದ್ಧಿಯೊಡನೆ ಮಾತೆಷ್ಟು ವಿಫಲವೆನುವುದನು

ನಾನು ಮನಗಂಡಿರುವುದಿದೆ ಮೊದಲ ಸಲವೇನಲ್ಲ.
ನಮ್ಮ ದೊರೆಯಿಚ್ಛೆಗಿಷ್ಟಿಷ್ಟು ಬಾಗಿ ನಡೆದಿದ್ದೆಯಾ, ನೀನು
ಬಾಳಬಹುದಿತ್ತು ಈ ನಾಡಿನಲ್ಲೆ, ನಿನ್ನ ಮನೆ ನಿನ್ನದಾಗಿ.
ಈಗಲೋ ಅಂಕೆಯಿಲ್ಲದ ನಿನ್ನ ನಾಲಗೆಯ ಫಲ ನಿನ್ನ ಗಡಿಪಾರು.
ಚಿಂತಿಸುವೆನೆಂದಲ್ಲ ನಾನು ಇದಕೆ. ಜೇಸನ್ ಅಯೋಗ್ಯನೆಂದು
ಎಲ್ಲರಿಗು ಸಾರುತ್ತ ಹೋಗಲೆಂದೂ ಸ್ವತಂತ್ರೆ ನೀನು.
ಆದರಾ ದೊರೆಯ ಕುರಿತ ನಿನ್ನ ಮಾತಿಗೆ ನಿನಗೆ ಶಿಕ್ಷೆ
ಗಡಿಪಾರಿಗಿಳಿದುದು ನಿನ್ನ ಅದೃಷ್ಟವಿಶೇಷವೆಂದೆ
ಎಣಿಸು ನೀನು. ನಾನೂ, ನನ್ನ ಕಡೆಯಿಂದ, ದೊರೆಯ ಕೋಪವನಿಳಿಸೆ
ಕೈಯಲಾದುದ ಮಾಡೆ ಸರ್ವದಾ ಶ್ರಮಿಸಿಹೆನು.
ನೀನು ಇಲ್ಲಿರುವುದು ಇಷ್ಟವೇ ನನಗೂ.
ಆದರೂ ನೀನವನನೆಡೆಬಿಡದೆ ಬೈಯುತ್ತಲೇ ಇದ್ದು ನಿನ್ನ
ತಪ್ಪು ನಡೆಯನು ಬಿಟ್ಟುಕೊಡಲೊಲ್ಲೆ. ಆದರಿಂದ
ನೀನು ಗಡಿಪಾರಾಗಲಿರುವೆ. ಇರಲಿ ಅದು, ನಿನ್ನ ನಡೆ
ಎಂತಿರಲಿ ನಾನೆನ್ನ ಕೆಳೆಯವರ ಕೈಬಿಡೆನು.
ಗಡಿಪಾರಿನಾಜ್ಞೆಯವಧಿಯಲಿ ನೀನೂ ಮಕ್ಕಳೂ
ಕೊರತೆಯನು ಕಾಣದಂತೆ, ಧನರಹಿತರಾಗದಂತೆ
ಏರ್ಪಡಿಸೆ ಬಂದಿರುವೆನು. ಏಕೆನಲು,
ಎಷ್ಟೊ ತೊಂದರೆಗಳನು ಗಡಿಪಾರು ಒಡ್ಡುವುದು.
ನೀನೆನ್ನ ದ್ವೇಷಿಸಿದರೂ ಸರಿಯೆ, ನಿನ್ನ ವಿಷಯದಲಿ
ಕೆಡಕು ಭಾವನೆಯಿಲ್ಲವೆನಗೆ.

ಮೀಡಿಯ—ಎಲವೊ ಕಡು ಹೇಡಿ,—ನಾ ನಿನ್ನ ಕರೆಯುವುದು ಹೀಗೆ,—
ಏಂಥ ಪೌರುಷ-ಹೀನ. . . ನೀನೆಂದು. ಧಿಕ್ಕಾರವೆನಗೆ!
ಬಂದಿರುವೆ ನೀನು; ಎನ್ನ ಹಗೆಗಳಲಿ ಹಗೆಯಾದ ನೀನು, ಎನ್ನ ಬಳಿಗೆ.
ಇದು ನಿದರ್ಶನವಲ್ಲ ಅತಿಯಾದ ನೆಚ್ಚುಗೆಗೆ; ನಿರ್ಭಯದಿ
ನಿನ್ನ ನೇಹಿಗರ—ನೀ ನೋಯಿಸಿದ ನೇಹಿಗರ
ನೋಡುವೆದೆಗಾರಿಕೆಗೆ; ಮಾನವರ
ಸಕಲರೋಗಗಳಲ್ಲಿ ಅತಿಹೇಯವಾದುದೀ ನಿರ್ಲಜ್ಜೆ.
ಆದರೂ ನೀ ಬಂದುದೊಳಿತಾಯ್ತು. ನಾ ನಿನಗೆ ಅಪ್ರಿಯ ನುಡಿದು
ನನ್ನೆದೆಯ ಹಗುರಗೊಳಿಸುವೆನು; ಕೇಳುತ್ತ ನೀ ದುಃಖಪಡುವೆ.
ಮೊದಲಾದುದೇನೊ ಅಲ್ಲಿಂದಲೇ ಮೊದಲುಮಾಡುವೆನು.
ನಾ ನಿನ್ನ ಜೀವವುಳಿಸಿದೆ, ಬೆಂಕಿಯುಸಿರಿನ ಗೂಳಿಗಳ ತಡೆದು,
ನೇಗಿಲಿಗೆ ಹೂಡಲೆಂದವರು ನಿನ್ನನು ಕಳುಹಿದಂದು, ಸಾವ ತರುವ
ಹೊಲವ ನೀ ಬಿತ್ತಬಯಸಿದಂದು, ನಾನದನು ಉಳಿಸಿದುದು

ನಿನ್ನ ಆರ್ಗೋ-ಕೆಳೆಯ ಗ್ರೀಕರೆಲ್ಲರಿಗೆ ತಿಳಿದಿದೆ ಇದು.
ನಾ ಕೊಂದೆ ತನ್ನ ಹಲ ಮೈಸುರುಳಿಯಲಿ ಹೊನ್ನ ತುಪ್ಪಟವ ಸುತ್ತಿಹಿಡಿದು
ಹಗಲಿರುಳು ಕಣ್ಣುಮುಚ್ಚದೆ ಕಾವಲಾಗಿದ್ದ ಸರ್ಪವದನು.
ಇಂತೆಸಗಿ ನಿನಗಿತ್ತೆನೀ ನೆಲದ ಬೆಳಕ ನೆಮ್ಮದಿಯನು.
ನನ್ನ ತಂದೆಗೆ, ನನ್ನ ಮನೆಗೆ ನಾನೇ ಎರಡಬಗೆದು
ನಿನ್ನ ಜತೆಯಲಿ ಬಂದೆ ಪೀಲಿಯಾಸನ ಅಯೋಲ್ಕಸ್ ನಾಡಿಗೆ,
ವಿವೇಕಕ್ಕಿಂತ ನೆರವಾಗಲಧಿಕತರದಿಷ್ಟವನು ತೋರಿ
ಪೀಲಿಯಾಸನ ಕೊಂದೆನಾ ಬಳಿಕ, ಅವನ ಮಕ್ಕಳ ಕೈಯಲಿ
ಅತಿಘೋರ ಸಾವನು ತರಿಸಿ ಅವಗೆ. ನಿನಗಿದ್ದ ಭಯವ ಕಳೆದೆ.
ನಿನ್ನೊಡನೆ ನಾ ನಡೆದುಕೊಂಡುದು ಇಂತು. ಎಲವೊ ಕೇಡಿಗ!
ನೀನೆನ್ನ ತೊರೆದೆ. ಹಾಸುಗೆಗೆ ಹೆಣ್ಣನಿನ್ನೊಂದ ತಂದುಕೊಂಡೆ,
ಮಕ್ಕಳಿದ್ದೂ ನಿನಗೆ; ಅಂತಿಲ್ಲದಿತ್ತೆ
ಇನ್ನೊಂದು ಮದುವೆಗೆ ನಿನಗೆ ನೆಪವಾದರೂ ಇತ್ತು.
ನಿನ್ನ ಮಾತಿನಲಿ ನಂಬಿಕೆ ಹೋಗಿದೆ. ನಾನಿದನೂ ಹೇಳಲಾರೆ:
ನೀನೆನಗೆ ಇತ್ತ ವಚನವ ನೀನೆ ಮುರಿದಿರಲು,—ನಿನ್ನೆಣಿಕೆಯಲಿ—
ನೀನಾಣೆಯಿಟ್ಟಂದು ಕರೆದ ಹಲವಾರು ಹೆಸರಿನ ದೇವರುಗಳ
ಆಳಿಕೆ ಮುಗಿದುದೇನೋ, ಹೊಸ ಮಾಸದಂಡಗಳು ನೆಲೆಗೊಂಡವೇನೋ.
ಓ ನನ್ನ ಬಲಗೈಯೆ, ಹಲವು ಸಲ ಯಾಚಿಸುತ ಬಂದು ನೀ
ಹಿಡಿಯುತ್ತಲಿದ್ದ ಮೊಣಕಾಲುಗಳೆ, ಈ ದುರುಳ ಬುದ್ಧಿಗೆಟ್ಟು
ಯಾವಗತಿಗೆಳೆದನೆನ್ನನು! ನನ್ನ ಭರವಸೆಗಳಲಿ
ಎಲ್ಲವೂ ಗುರಿತಪ್ಪಿವೆ.
ನನ್ನ ಯೋಚನೆಗಳಲಿ ನೇಹಿಗನಂತೆ ಬಾ, ಭಾಗಿಯಾಗು!
ನನ್ನನೆಂದಾದರೂ ನೀನುಚಿತರೀತಿಯಲಿ ಕಾಣಬಹುದೆಂದು ಯೋಚಿಸಲು
ಬಲ್ಲೆನೆ?
ಆದರೂ ಮಾಡುವೆನು, ಈ ಪ್ರಶ್ನೆಗಳು ನಿನ್ನ-
ನಿನ್ನಷ್ಟು ಕೀಳಾಗಿ ಕಾಣಿಸುವುವು. ಎಲ್ಲಿ ಹೋಗಲಿ ನಾನು? ತವರು
ಮನೆಗೆ?
ನಾನೆರಡುಗೆದೆ ತಂದೆಗೆ, ಅವನ ನಾಡಿಗೆ, ನಿನ್ನೊಡನೆ ಹೊರಟುಬಂದಂದು.
ದುಃಖಾರ್ತ ಪೀಲಿಯಾಸನ ಕುವರಿಯರ ಬಳಿಗೆ? ತಮ್ಮ ತಂದೆಯ
ಕೊಲಿಸಿದೆನಗೆ
ಎನಿತು ಸೊಗಸಿನ ಸ್ವಾಗತವ ರಚಿಸಬಹುದವರು!
ಇದು ನನ್ನ ಸ್ಥಿತಿ; ದ್ವೇಷಿಸುವರೆನ್ನ ಕೆಳೆಜನರು. ನನ್ನ ತವರಿನಲಿ
ಇತರರಿಗೆ—ಅವರ ನೋಯಿಸದೆ ಇರಬಹುದಿತ್ತು—
ನಿನ್ನ ಕಡೆಗೆದೆಕರಗಿ ಹಗೆಯಾಗಿರುವೆ ನಾನು.

ನಿನ್ನಿಂದ ಎನಗೊ ? ಈ ಗ್ರೀಕರ ಸಮಸ್ತ ವನಿತೆಯರಲ್ಲಿ
ಎಷ್ಟು ಸುಖಿ ಎನಿಸಿರುವೆ ನನ್ನ ನೀನು !
ನನಗೊಬ್ಬ ಗಂಡನಿಹನು ; ಅವನು ಹೆಸರಾದವನು
ವಚನಭಂಗಕ್ಕೆ. ಅತಿಕಷ್ಟದಲ್ಲಿರುವೆನಗೆ
ಗಡಿಪಾರಿನಾಜ್ಞೆಯಾಗಿ ಅಟ್ಟಿರಲು ನಾಡಹೊರಗೆ,
ಹೋಗುವೆನು ಕೆಳೆಯೆನುವುದಿಲ್ಲದೆಯೆ, ಮಕ್ಕಳೊಂದಿಗಳೊಂಟಿಯಾಗಿ.
ತನ್ನನುಳಿಸಿದವಳು, ತನ್ನ ಮಕ್ಕಳು ಹೀಗೆ ತಿರುಕರಾಗಲೆಯುವುದು
ಹೊಸ ಮದುವೆಗಂಡಿಗದು ಶುದ್ಧ ನಾಚಿಕೆಗೇಡು.
ದೇವರೇ, ನೀನು ಮರ್ತ್ಯರ ಕೈಗೆ ಕೊಟ್ಟಿರುವೆ
ಚಿನ್ನದಲಿ "ಇದು ಚೊಕ್ಕ, ಇದು ಪುಸಿ" ಎಂದರಿವ ಖಂಡಿತ
ವಿಧಾನವನು,
ಕೊರೆದಿಲ್ಲವೇಕೆ ನರರ ಮೈಗಳ ಮೇಲೆ "ಇವ ಸತ್ಯನಿವ ಸುಳ್ಳ"
ಎಂದೆಮಗೆ ತಿಳಿಸುವೇನೊಂದು ಚಿಹ್ನೆಯನೂ ?

ಮೇಳ— ಗೆಳೆಯರಿಬ್ಬರು ದ್ವೇಷದಿಂದ ಒಬ್ಬರೊಬ್ಬರ ಮೇಲೆ ತಿರುಗಿದಾಗ
ವಿರೂಪ ತಳೆವುದು ಕೋಪ ; ದುರ್ಲಭವಿದಕೆ ಮದ್ದು.

ಜೇಸನ್— ನಾನೂ ಕಳಪೆಯಲ್ಲದ ಮಾತುಗಾರನೇ ಒಬ್ಬ, ನನ್ನ ಕೇಳಿದರೆ.
ಆದರೂ ತನ್ನ ಬಿಗಿಯಂಕೆಯಲಿ ಹಡಗನು ನಡಸುವವನಂತೆ,
ಎಲೆ ಹೆಣ್ಣೆ, ನಿನ್ನ ಕಟು ನಾಲಗೆಯ ಆರ್ಭಟದ ಬಿರುಗಾಳಿ ಬೀಸಿದಾಗ
ಪಟದ ಮಡಿಕೆಯ ಸುತ್ತಿ, ಅದರ ಕೆಳಗೇ ನುಣಿಚಿ ದಾಟಿಕೊಳ್ಳುವೆನು.
ನನ್ನ ಕಂಡರೆ ನಿನಗೆ ಕರುಣೆ ಅಲ್ಲವೆ ? ನೀನು ಅದನೆ ಅತಿ ಪೇರಿಸುತ್ತಿರುವೆ.
ನನ್ನ ಮನಗಾಣ್ಕೆಯಿದು : ನಾ ಬಾಳುವುದಕೆ ಹೊಣೆ
ಮನುಜರಲಿ ದಿವಿಜರಲಿ ಸೈಪ್ರಿಸ್ ತಾನೊಬ್ಬಳೆ.
ನೀನು ಸಾಕಷ್ಟು ಜಾಣೆಯೆ. ಅಂದು ದುರ್ವಾರ್ಯ ಪ್ರೇಮಬಲವೇ
ನನ್ನ ರಕ್ಷಿಸುವಂತೆ ನಿನ್ನ ಪ್ರೇರಿಸಿತೆನುವ ಆ ಹಳೆಯ ಕತೆಗೆ
ಮತ್ತೆ ಹೋಗೆನು ; ಅನಗತ್ಯವದು.
ನಾನದರ ವಿವರಗಳ ಅತಿಗೆ ಹೋಗೆನು.
ನೀನೆನಗೆ ನೆರವಿತ್ತ ಮಟ್ಟಿಗೆ, ಒಳಿತನೇ ನೀ ಮಾಡಿದೆ.
ನೀನೆನ್ನ ಬದುಕಿಸಿದ ಮಾತನೆತ್ತಿದರೆ, ನಾನು ತೋರಿಸ ಬಲ್ಲೆ
ನೀನು ಕೊಟ್ಟುದಕಿಂತ ನನ್ನಿಂದ ಪಡೆದುದೇ ನಿಜವಾಗಿ ಅಧಿಕವೆಂದು.
ಮೊದಲಿಗಿದು : ಬರ್ಬರರ ನಡುವೆ ಬಾಳುವ ಬದಲು
ಗ್ರೀಕರೊಂದಿಗೆ ನೀನು ಬಾಳುತಿರುವೆ. ತಿಳಿದಿರುವೆ
ನಮ್ಮ ಪದ್ಧತಿಗಳನು, ಸವಿಯಿಚ್ಛೆ ಎಳೆವಂತೆ ಇರುವ ಬದಲು
ನ್ಯಾಯಕ್ಕೆ ಹೊಂದಿ ಬಾಳುವ ಪರಿಯನು.
ಗ್ರೀಕರೆಲ್ಲರು ನಿನ್ನ ಬಲು ಜಾಣೆ ಎಂದರು.

ಆದಕಾಗಿ ನಿನಗೆ ಗೌರವ ಸಂದಿತು. ಇಲ್ಲವೆ,
ಇರುತ್ತಿದ್ದೆ ನೀನು ಭೂಮಿಯ ಯಾವುದೋ ಕೊನೆಮೂಲೆಗಳಲಿ,
ಯಾರ ಕಿವಿಗೂ ನಿನ್ನ ಸುದ್ದಿಯೇ ಬೀಳದೆ.
ಈ ನನ್ನ ಮನೆಯಲ್ಲಿ ಹೊನ್ನ ಕೂಡಿಸಿ ಇಡುವುದಕ್ಕಿಂತ
ಮಧುರತರ ಗಾನದಲಿ ಆರ್ಫಿಯಸ್ಸನ ಮೀರಿಸುವ ಶಕ್ತಿಗಿಂತ
ಹಿರಿ ಹೆಸರನೆನಗೆ ದೊರಕಿಸಿದ ವಿಧಿಯೇ ನನ್ನಿಷ್ಟದಲಿ ನನ್ನಾಯ್ಕೆ.
ನನ್ನ ದುಡಿಮೆಯ ನಿನ್ನ ಕತೆಗೆ ನನ್ನ ಉತ್ತರವಲ್ಲಿದೆ.
ವಾದ ಮೊದಲಾದದ್ದು ನಿನ್ನಿಂದ ನೆನಪಿರಲಿ!
ಇನ್ನು, ಈ ದೊರೆಮಗಳ—ನನ್ನ ಮದುವೆಯ ಪ್ರಶ್ನೆ, ಅದಕೆ ನಿನ್ನ ವಿರೋಧ
ದೃಢಪಡಿಸುವೆನು ಇಲ್ಲಿ ಮೊದಲು, ಇದೊಂದು ಚತುರೋಪಾಯ;
ಎರಡು, ಇದೊಂದು ವಿವೇಕದ ಹೆಜ್ಜೆ; ಕೊನೆಯ ಮಾತಾಗಿ ನಾನಿದನ
ನಿನಗೆ, ನಿನ್ನ ಮಕ್ಕಳಿಗೆ ಒಳಿತಾಗಲೆಂದು ಮಾಡಿದೆನು.
ಉಪಶಾಂತಳಾಗು ನೀನು.
ಎಲ್ಲ ಬಗೆ ಕಷ್ಟದಲಿ ಸಿಕ್ಕಿಬಿದ್ದು
ಅಯೋಲ್ಕಸ್ ನಾಡಿನಿಂದಿತ್ತ ಬಂದಾಗ ರಾಜ್ಯಚ್ಯುತನಾದ ನಾನು
ರಾಜಕುವರಿಯ ಕೈಯ ಹಿಡಿವುದಕ್ಕಿಂತಲೂ
ಮಿಗಿಲಾದ ಯಾವ ಭಾಗ್ಯವ ಬಯಸಬಹುದಿತ್ತು?
ಇದೆಂದು ತೋರುವುದು ನಿನ್ನ ಸಿಟ್ಟಿಗೆ ಕಾರಣ; ಆದರೆ ನಿಜವಲ್ಲ,
ನಿನ್ನ ಹಾಸುಗೆಗೆ ನಾ ದಣಿದೆ, ಹೊಸತು ಹೆಣ್ಣೊಂದು ಬೇಕಾಯ್ತು ಎನಗೆನುವುದು
ನಿನಗಿರುವ ಮಕ್ಕಳ ಸಂಖ್ಯೆ ಮೀರಿಸುವ ಆಸೆಯಿಂದಲು ಅಲ್ಲ.
ಈಗಾಗಲೇ ಸಾಕಷ್ಟು ಮಕ್ಕಳಿವೆ ನಮಗೆ. ತೃಪ್ತಿಯಾಗಿಹುದು ಎನಗೆ
ಮುಖ್ಯಕಾರಣವಿದು; ನಾವು ಮೇಲ್ತರದಿ ಬದುಕಬಹುದು,
ಏತಕೂ ಕೊರತೆಯಿಲ್ಲದಿರಲುಬಹುದು. ಅರಿತಿಹೆನು ನಾನು:
ನಿರ್ಧನನ ತ್ಯಜಿಸುವರು ಎಲ್ಲರೂ ಕೊರೆವ ನಿರ್ದಯತೆಯಲ್ಲಿ.
ಜತೆಗೆ ಇದು; ಎನ್ನ ಮಕ್ಕಳನೆನ್ನ ಅಂತಸ್ತಿಗುಚಿತವಹ ರೀತಿಯಲಿ
ಮುಂದಕ್ಕೆ ತರಬಹುದು ನಾನು; ನಿನ್ನ ಮಕ್ಕಳಿಗೆ ತಮ್ಮಂದಿರಾಗೆ
ಹೆಚ್ಚು ಮಕ್ಕಳ ಪಡೆದು ಎರಡು ಸಂಸಾರಗಳ
ಸೇರಿಸಲುಬಹುದು, ಎಲ್ಲರಿಗು ಸುಖವಹುದು. ಬೇಕಿಲ್ಲ ನಿನಗೆ ಮಕ್ಕ'
ನನಗೊ—ಇತರರನು ಪಡೆದು ಈಗಿರುವ ಮಕ್ಕಳಿಗೆ ಒಳ್ಳಿತ-
ನ್ನೆಸಗುವ ಪ್ರಯೋಜನವಿಹುದು. ಕುತಂತ್ರವೆನಿಸುವುದೆ ನಿನಗಿದು?
ಎನಿಸುತಿರಲಿಲ್ಲ ನಿನಗೆ, ಪ್ರೇಮದ ಪ್ರಶ್ನೆ ಕೆರಳಿಸದಿದ್ದರೆ.
ಈ ನಿಮ್ಮ ಹೆಂಗಸರ ಬುದ್ಧಿಯ ನೆಲೆಯೆ ಹೀಗೆ; ನಿಮಗೆ

ನಿಮ್ಮೆಯ ಬದುಕು ರಾತ್ರಿಯಲಿ ಚನ್ನವಿರೆ, ತಿಳಿಯುವಿರಿ
ಎಲ್ಲವೂ ಸಿಕ್ಕಿತೆಂದು. ಆ ಭಾಗದಲ್ಲಿ ಏನಾದರೂ ತಪ್ಪಿತೊ,
ನಿಮ್ಮ ಉತ್ತಮ ಪರಮಹಿತಗಳನು ನೀವು ಗಣಿಸುವಿರಿ
ಅತಿಹೇಯವೆಂದು. ಎಷ್ಟೋ ಉತ್ತಮವಿತ್ತು, ಗಂಡಸಿಗೆ
ಮಕ್ಕಳನು ಬೇರೊಂದು ರೀತಿಯಲಿ ಪಡೆಯುವುದು ; ಹೆಂಗಸರು
ಇಲ್ಲದಿದ್ದರೆ ಮೇಲಿತ್ತು. ಆಗ ಬದುಕೊಳ್ಳೆಯದಾಗುತಿತ್ತು.

ಮೇಳ— ಜೇಸನ್ ಚಂದಗಾಣುವ ಹಾಗೆ ನಿನ್ನ ಭಾಷಣವಿದನು ನೀ ಮಾಡಿರುವೆಯಾದರೂ
ನನಗೆ ಅನ್ನಿಸುವುದಿದು—ಬೇರೆಯವರೊಪ್ಪದಿರಬಹುದಿದನು : ನಿನ್ನ ಹೆಂಡತಿಗೆ
ದ್ರೋಹವೆಸಗಿರುವೆ ನೀನು. ಕೆಡುಕು ನಿನ್ನ ನಡೆ.

ಮೀಡಿಯ— ಹೆರರ ಕಾಣ್ಕೆಗಳಿಗಿಂತ ಎನ್ನವು ಬೇರೆ ಹಲವು ಬಗೆಯಲಿ
ಎಂಬುದು ನಿಜ. ನನ್ನೆಣಿಕೆಯಿದು ; ಸವಿನುಡಿವ ದುಷ್ಟ
ಭಾಷಣಕಾರನರ್ಹನು ಪರಮಶಿಕ್ಷೆಗೆಂದು.
ಹೊಲ್ಲನನ್ನು ಸಿಂಗರಿಸೆ ತನ್ನ ನಾಲಗೆ ಬಲವ ನಂಬಿರುವ ಅವನು
ನಿಲ್ಲನೇತಕ್ಕೂ. ನಿಜ, ವಿವೇಕಿಯಲ್ಲ ಅವನು,
ನಿನ್ನಂತೆಯೇ. ಚತುರ ಮಾತಿಗನಂತೆ ನಟಿಸುವುದು
ಅನಗತ್ಯ. ಮಾತೊಂದು ನಿನ್ನದನು ವ್ಯರ್ಥಗೊಳಿಸುವುದು.
ನೀ ಹೇಡಿ ; ಇಲ್ಲದಿರೆ ನೀ ಮದುವೆಯಾಗುತಿರಲಿಲ್ಲ
ನನ್ನ ಬೆನ್ನಹಿಂದೆ ; ಚರ್ಚಿಸುತ್ತಿದ್ದೆ ನನ್ನೊಂದಿಗದನು ಮೊದಲು.

ಜೇಸನ್— ಅದು ಸಾಗುವಂತೆ ನೀ ಮಾಡುತ್ತಿದ್ದೆ, ನಿಜವೆ,
ನಾನದನು ನಿನಗೆ ತಿಳಿಸಿದ್ದರೆ,
ಈಗಲೂ ಕಹಿಕೋಪವನ್ನಿದನು ತಡೆಯಲಾರದವಳು.

ಮೀಡಿಯ— ಅದಲ್ಲ ಕಾರಣ. ನಿನಗೆ ಹೊಳೆಯಿತು, ವರುಷಗಳು ಕಳೆದಮೇಲೆ
ಪರನಾಡ ಮಡದಿಯಿರುವುದು ನಿನಗೆ ತಕ್ಕುದಲ್ಲವೆಂದು.

ಜೇಸನ್— ಖಚಿತಮಾಡಿಕೊ ಇದನು : ಒಂದು ಹೆಣ್ಣಿಗೆ ಅಲ್ಲ,
ಇಂದೆನ್ನದಾಗಿರುವ ರಾಜಸಂಬಂಧವನು ನಾ ಮಾಡಿಕೊಂಡುದು.
ನಾ ಮೊದಲೆ ನುಡಿದಂತೆ ನಿನ್ನ ರಕ್ಷಿಸುವುದೆನ್ನ ಬಗೆಯಲಿತ್ತು ;
ಈಗ ನನಗಿರುವ ಮಕ್ಕಳಿಗೆ ತಮ್ಮಂದಿರಾಗಿರಲು
ರಾಜಸಂತತಿಯೊಂದ ಪಡೆವುದೆನ್ನಿಷ್ಟವಾಗಿತ್ತು ದೃಢರಕ್ಷೆ ನಮಗದೆಂದು.

ಮೀಡಿಯ— ಒಡನೆ ನೋವನು ತರುವ ಯಾವ ಸುಖಮಯ ಅದೃಷ್ಟವೂ
ಬುದ್ಧಿಗೆಡಿಸುವ ಯಾವ ಏಳ್ಗೆಯೂ ಬೇಡವೆನಗೆ !

ಜೇಸನ್— ನಿನ್ನ ಬಯಕೆಯ ಕಲ್ಪನೆಗಳನು ಮಾರ್ಪಡಿಸು ; ಹೆಚ್ಚು
ತಿಳಿವಳಿಕೆಯನು ತೋರಿಸು ;
ನಿನಗೆ ಒಳಿತಾದುದನು ಗಣಿಸದಿರು ನೋಯಿಸುವುದೆಂದು,
ದೆಸೆಕೂಡಿದಾಗಲೂ ನಿರ್ಭಾಗ್ಯೆ ನೀನೆಂದು.

ಮೀಡಿಯ— ನೀನೆನ್ನನಪಮಾನಗೊಳಿಸಬಲ್ಲೆ ; ನಿನಗೊಂದು ಬೇರೆ ನೆಲೆಯಿಹುದು ತಿರುಗೆ.
ನಾನೊ, ಬಿಟ್ಟು ಈ ನಾಡನ್ನು ಹೋಗಬೇಕಾದವಳು, ಗಡಿಪಾರು,
ಕೆಳೆಯಿಲ್ಲದೆ.

ಜೇಸನ್— ಅದು ನೀನೆ ಮಾಡಿಕೊಂಡಾಯ್ಕೆ ; ಹೆರರನದಕಾಗಿ ನೀ ದೂಷಿಸದಿರು.

ಮೀಡಿಯ— ನಾನದನು ಆಯ್ದುದೆಂತು ? ನನ್ನ ಗಂಡನಿಗೆರಡು ಬಗೆದೆನೆ ?

ಜೇಸನ್— ಕೆಡು ಶಾಪಗಳ ಹಾಕಿದೆಯೆ ದೊರೆಯ ಸಂಸಾರಕ್ಕೆ.

ಮೀಡಿಯ— ಒಂದು ಶಾಪ—ನಾನಾಗಿರುವೆ ನಿನ್ನ ಮನೆಗೂ.

ಜೇಸನ್— ಅದರುಳಿದ ವಿವರಗಳತ್ತ ನಾ ಹೋಗಲಾಶಿಸೆನು ;
ಆದರೂ ಗಡಿಪಾರಿನಲಿ ನಿನಗೊ, ನಿನ್ನ ಮಕ್ಕಳಿಗೊ,—
ಒಟ್ಟಿನಲಿ ನಿಮ್ಮ ನೆರವಿಗೆ—ನನ್ನ ಹಣವಿನಿಸು ಬೇಕೆನಿಸಿದರೆ ನಿನಗೆ,
ಹೇಳು ಹಾಗೆಂದು, ಕೈತೆರೆದು ಕೊಡುವೆ ನಾನದನು.
ನಿಮ್ಮನಾದರದಿಂದ ನೋಡಿಕೊಳ್ಳುವ ನನ್ನ ಗೆಳೆಯರಿಗೆ
ಪರಿಚಯದ ಪತ್ರಗಳ ಬರೆದುಕೊಡಲೂ ಸಿದ್ಧನಿಹೆನು.
ತಿಳಿಗೇಡಿಯೆಂದಾರು ಇದನೊಲ್ಲದಿರೆ ನೀನು. ಕೋಪವನು ಬಿಡು,
ಲಾಭವಿದೆ ನಿನಗೆ.

ಮೀಡಿಯ— ನಿನ್ನ ಗೆಳೆಯರ ಅನುಗ್ರಹವನೆಂದಿಗೂ ಕೊಳ್ಳೆನು.
ಏನೊಂದನೂ ಕೊಳ್ಳೆ ನಿನ್ನಿಂದ, ನೀನದನು ಕೊಡುವೆನೆನುವುದು ಬೇಡ.
ಕೆಟ್ಟವನ ಕೊಡುಗೆಗಳಲಾವ ಹಿತವೂ ಇಲ್ಲ.

ಜೇಸನ್— ಸರಿ, ಅದೆಂತಿರಲಿ, ನಿನಗೆ, ಈ ಮಕ್ಕಳಿಗೆ ಎಲ್ಲ ವಿಧಗಳಲಿ
ನೆರವಾಗಬಯಸುವೆನು. ನಿಮಗೆ ಒಳಿತನು ನೀನು ನಿರಾಕರಿಸುತಿರುವೆ.—
'ಸಾಕ್ಷಿ ನೀವೆ'ಂದಿದಕೆ ಕರೆಯುವೆನು ದೇವರುಗಳ.
ನೇಹಿಗರ ನೂಕುತಿಹೆ ಮೊಂಡುತನದಿಂದ ; ನೀನಿದಕೆ ಪರಿತಪಿಪೆ, ಅದು
ಖಂಡಿತ.

ಮೀಡಿಯ— ಹೋಗು, ಸಂಶಯವಿಲ್ಲ ; ಹಂಬಲಿಸುತಿರಬೇಕು ನೀ ನಿನ್ನ ಹೊಸವಧುವಿಗೆ ;
ಅವಳ ಮನೆಹೊರಗೆ ನಿಡುಗಾಲ ನಿಲ್ಲುವ ಕೆಡುಕನೆಸಗುತಿಹೆ ನೀನು.
ಸವಿ ಮದುವೆಯನು. ಆದರೆಂತೊ—ದೇವನ ಸಹಾಯವಿರೆ—
ನಿನ್ನ ಮದುವೆಯ ಬಗೆಗೆ ಪರಿತಪಿಪೆ ನೀನು !

[ಜೇಸನ್ ತನ್ನ ಸೇವಕರೊಂದಿಗೆ ನಿರ್ಗಮಿಸುತ್ತಾನೆ.]

ಮೇಳ— ಮಿತಿಯ ಮೀರಿದ ಪ್ರೇಮ
ಮನುಜನಿಗೆ ತಾರದು

ಯಾವ ಗೌರವವನೂ, ಯಾವ ಗಣ್ಯತೆಯನೂ.
ಆದರೂ ಹಿತಮಿತದಿ ಸೈಪ್ರಿಸ್ ಬಂದಳೆನೆ,
ಅವಳ ಕೃಪೆಗೆಣೆಯಿಲ್ಲ ಅನ್ಯದೇವತೆ ಯಾರೂ.
ಓ ದೇವಿ, ಗುರಿತಪ್ಪದಿಹ ನಿನ್ನ ಬಿಲ್ಲ ಬಾಣವನೆಂದೂ
ಎನ್ನ ಮೇಲಿಳಿಸದಿರು ಕಾಮದ ವಿಷದಲಿ.
ತಿಳಿವಳಿಕೆ ಬರಲಿ ಎನ್ನೆದೆಗೆ ;
ಅದುವೆ ದೇವತೆಗಳುತ್ತಮದ ಕೊಡುಗೆ.
ಪ್ರಬಲೆ ಸೈಪ್ರಿಸ್ ವಿಧಿಸದಿರಲೆನ್ನ ಮೇಲೆ
ಅವಿಶ್ರಾಂತ ಕೋಪವನೊ ವಾಗ್ಯುದ್ಧಗಳನೊ,
ಬೇರೆ ಒಲವಿಗೆ ಎನ್ನ ಕಾಮಭರವನು ಸೆಳೆಯೆ.
ನಡಸಲಿ ವಿವೇಕದಿಂದವಳು ನಾರಿಯರ ಮದುವೆಗಳನು,
ಹಾಸುಗೆಯ ಶಾಂತಿಗೇ ನೀಡಿ ಅತಿಗೌರವವನು.
ಓ ನಾಡೆ, ಮನೆಯೆ,
ನಾ ನಿಮ್ಮನಗಲಿ
ಕಳೆಯಲತಿಕಷ್ಟವಾದ, ನೋವಿಡಿದ, ಭರವಸೆಗಾಣದ
ಕನಿಕರಕೆ ಈಡಾದ ಬಾಳು ಎನಗೆ
ಎಂದೆಂದಿಗೂ ಒದಗದಿರಲಿ !
ಅದಕಿಂತ ಮೊದಲು ಸಾವೆನ್ನ ಕೆಡಹಲಿ ಕೆಳಗೆ ; ಸಾವು
ಬಿಟ್ಟು ಕೊಡಲೆನ್ನ ನೀ ಹಗಲಬೆಳಕಿಂದ.
ಹುಟ್ಟುನಾಡಿನ ನಷ್ಟಕಿಂತ
ಮಿಗಿಲಾದ ದುಃಖವಿನ್ನಿಲ್ಲ.
ನಾನೆ ಕಂಡಿರುವೆನಿದನು ;
ಹೇಳುವುದು ಹೆರರು ಕೇಳಿದ ಕತೆಯನಲ್ಲ.
ನೀನು ಕಡುಸಂಕಟವನನುಭವಿಸಿದಾಗ
ಕನಿಕರಿಸಲಿಲ್ಲ ನಗರ, ಯಾವ ಕೆಳೆಯೂ.
ಓ ಸಾಯಲವನು ಕೃಪೆಕಾಣದೆ—
ನೇಹಿಗರ ಬಹುಮಾನಗೊಳಿಸಲೊಲ್ಲದನು,
ಕಪಟವಿಲ್ಲದ ಮನವ ತೆರೆಯಲಾರದವನು !
ನೇಹಿಗನೆ ನನಗಾಗನವನು.

[ಅಥೆನ್ಸಿನ ರಾಜನೂ ಮೀಡಿಯಳ ಹಳೆಯ ಸ್ನೇಹಿತನೂ ಆದ ಐಜಿಯಸ್ಸಿನ ಪ್ರವೇಶ.]

ಐಜಿಯಸ್— ಮೀಡಿಯ, ಸ್ವಸ್ತಿ ! ನೇಹಿಗರ ನಡುವೆ ಸಂಭಾಷಣೆಗೆ
ಮಾನವರು ಬಲ್ಲ ಪೀಠಿಕೆಗಳಲಿ ಇದೇ ಉತ್ತಮ.

ಮೀಡಿಯ— ಪ್ಯಾಂಡಿಯನ್ ರಾಜನ ಕುಮಾರನೆ, ಐಜಿಯಸ್, ನಿನಗೂ ಸ್ವಸ್ತಿ !
ಎಲ್ಲಿಂದ ನೀ ಬಂದುದೀ ನಾಡ ನೆಲದ ಭೇಟಿಗೆ ?

ಐಜಿಯಸ್— ನಾನೀಗ ತಾನೆ ಫೀಬಸನ ಪ್ರಾಚೀನ ದೈವವಾಣಿಯ ನೆಲೆಯ
ಬಿಟ್ಟು ಬಂದೆ.

ಮೀಡಿಯ— ಕಣಿ ನುಡಿವರಿರುವ ಪೃಥ್ವಿಯ ಕೇಂದ್ರವದು ; ಅಲ್ಲಿಗೆ ನೀ ಹೋದುದೇಕೆ ?

ಐಜಿಯಸ್— ಮಕ್ಕಳಾಗುವುದೆಂತು ನನಗೆನುವುದನು ಕೇಳ ಹೋದೆ ನಾನು.

ಮೀಡಿಯ— ಹಾಗೇನು ? ಮಕ್ಕಳಿಲ್ಲದ ಬದುಕೆ ನಿನ್ನದೀತನಕ ?

ಐಜಿಯಸ್— ಹೌದು. ಯಾವ ಶಕ್ತಿಯ ವಿಧಿಯೊ ! ಮಕ್ಕಳಿಲ್ಲವೆಮಗೆ.

ಮೀಡಿಯ— ನಿನಗಿಹಳೊ ಮಡದಿ, ನಿನ್ನ ಹಾಸುಗೆಯ ಪಾಲುಗೊಳಲಾವಳೂ ಇಲ್ಲವೊ ?

ಐಜಿಯಸ್— ಇಹಳು. ಮದುವೆಯಲಿ ಕೂಡಿದೊಬ್ಬಳು ಮಡದಿಯಿಹಳೆನಗೆ.

ಮೀಡಿಯ— ಮಕ್ಕಳಾಗುವುದ ಕುರಿತು, ಫೀಬಸ್ ಏನೆಂದ ನಿನಗೆ ?

ಐಜಿಯಸ್— ಪ್ರಾಜ್ಞನುಡಿಗಳು, ನರಮಾತ್ರಸೂಹನೆಗರ್ಥವೇ ಆಗದವು.

ಮೀಡಿಯ— ದೇವತೆಯ ಉತ್ತರವನೆನಗೆ ತಿಳಿಸುವುದು ಯುಕ್ತವೆ ?

ಐಜಿಯಸ್— ಯುಕ್ತ. ಏಕೆನಲು, ಜಾಣ್ಮೆಯ ಅಗತ್ಯವಿದೆ ನಿಶ್ಚಯವಾಗಿ, ಅದಕೆ.

ಮೀಡಿಯ— ಅಂತಾದರವನ ಸಂದೇಶವೇನು ? ಹೇಳೆನಗೆ, ಕೇಳಬಹುದಾಗೆ ನಾನು !

ಐಜಿಯಸ್— ದ್ರಾಕ್ಷಾರಸದಬುದ್ದಲಿಯ ತೂಗುವಡಿಯನು ಸಡಿಲಿಸಬಾರದಂತೆ ನಾನು—

ಮೀಡಿಯ— ಇನ್ನಾವುದನೊ ನೀ ಮಾಡುವನಕ, ಇಲ್ಲ, ಇನ್ನಾವ ನಾಡನೋ
ಸೇರುವನಕ ?

ಐಜಿಯಸ್— ನಾನೆನ್ನ ಮನೆಬಾಗಿಲಿಗೆ ಹಿಂದಿರುಗುವನಕ.

ಮೀಡಿಯ— ಈ ನಾಡಿಗೇಕೆ ಪಯಣಬಂದಿಹೆ ನೀನು ?

ಐಜಿಯಸ್— ಟ್ರೋಯ್‌ಜೆನಿನ ರಾಜ ಪಿಥೆಯಸ್ ಎನ್ನುವವನಿಹನು.—

ಮೀಡಿಯ— ಪೆಲೋಪ್ಸರ ಮಗ ; ಪರಮ ಧರ್ಮಿಷ್ಠನೆನುವರವನನು.

ಐಜಿಯಸ್— ಚರ್ಚಿಸಲು ಬಯಸುವೆನು ದೇವತೆಯ ಉತ್ತರವನವನೊಡನೆ.

ಮೀಡಿಯ— ಹೌದು. ಪ್ರಾಜ್ಞನವ, ಇಂಥ ಸಂಗತಿಗಳಲಿ ನುರುಗಿದವನು.

ಐಜಿಯಸ್— ಅಲ್ಲದೆಯೊ, ನನ್ನ ಈಟಿಯ ಗೆಳೆಯರೆಲ್ಲರಲ್ಲಿ ಅತಿಪ್ರಿಯನವನು.

ಮೀಡಿಯ— ಸರಿಯೆ, ಅದೃಷ್ಟ ಫಲಿಸಲಿ ನಿನಗೆ ! ನಿನ್ನಿಚ್ಛೆ ನೆರವೇರಲಿ !

ಐಜಿಯಸ್— ಆದರೀ ನಿನ್ನ ಕೆಳಗೆಸೆದ ಕಣ್ಣೇನು ? ಬಾಡಿರುವ ಕೆನ್ನೆಯೇನು ?

ಮೀಡಿಯ— ಓ ಐಜೆಯಸ್, ನನ್ನ ಗಂಡನೆ ನನಗೆ ಪರಮ ದೌರ್ಭಾಗ್ಯವಾಗಿಹನು.

ಐಜಿಯಸ್— ಹಾಗೆಂದರೇನು ? ಈ ದುಃಖಕ್ಕೆ ಕಾರಣವ ಬಿಡಿಸಿ ಹೇಳು.

ಮೀಡಿಯ— ಕೇಡನೆಸಗುವನೆನಗೆ ಜೇಸನ್, ಕೆಟ್ಟುದನು ಅವಗೆಂದೂ ನಾ ಮಾಡಿದವಳಲ್ಲ.

ಐಜಿಯಸ್— ಅವನೇನ ಮಾಡಿಹನು ? ನನಗದನು ಇನ್ನಷ್ಟು ಮಾತಿನಲಿ ಬಿಡಿಸಿ ಹೇಳು.

ಮೀಡಿಯ— ಮಡದಿಯೊಬ್ಬಳ ತಂದುಕೊಂಡಿಹನು ಮನೆಗೆ, ನನ್ನನುತ್ಪಾಟಿಸಿ.

ಐಜಿಯಸ್— ಆ ಪರಿಯದೇನನೆಸಗುವ ಧೈರ್ಯವೂ ಅವನಿಗಿರಲಾರದೆನಿಸುವುದು ನನಗೆ.

ಮೀಡಿಯ— ಎಸಗಿಹನು. ದಿಟವದು.—ಒಮ್ಮೆ ಪ್ರಿಯೆ, ಇಂದವಗುಪೇಕ್ಷಿತಳು ನಾನು.

ಐಜಿಯಸ್— ಪ್ರೇಮಕ್ಕೆ ಸಿಕ್ಕಿಬಿದ್ದನೊ ? ಇಲ್ಲ, ನಿನ್ನ ಪ್ರೇಮಕ್ಕೆ ಬೇಸರಗೊಂಡನೊ ?

ಮೀಡಿಯ— ಪ್ರೇಮ ಬಹುವಾಯಿತು, ಮಿತ್ರಘ್ನನಾದಿವನಿಗೆ.

ಐಜಿಯಸ್— ಅಂತಾದರವನು ಹೋಗಲಿ, ನೀನು ನುಡಿವಂತೆ ಅವನಷ್ಟು ಕೆಟ್ಟವನಾದರೆ.
ಮೀಡಿಯ— ಕಾಮ ಭರ ಪ್ರೇಮವದು,—ರಾಜನ ನಂಟ ಬಯಸಿ.
ಐಜಿಯಸ್— ಮಡದಿಯನು ಕೊಟ್ಟವರು ಯಾರವನಿಗೆ? ಉಳಿದುದನು ಹೇಳು ಎನಗೆ.
ಮೀಡಿಯ— ಕೊಟ್ಟವನು ಕ್ರೀಯಾನ್, ಕಾರಿಂಥಿನೀ ನಾಡನಾಳುವವನು.
ಐಜಿಯಸ್— ನಿಜವಾಗಿಯೂ, ಮೀಡಿಯ, ನಿನ್ನ ಅಳಲನರಿಯಬಹುದು.
ಮೀಡಿಯ— ನಾಶಮಾಡಿಹರೆನ್ನ. ಮತ್ತನಷ್ಟು ಬರಲಿಹುದು. ರಾಜ್ಯಭ್ರಷ್ಟೆ ನಾನು.
ಐಜಯಸ್— ನೀನು ರಾಜ್ಯಭ್ರಷ್ಟೆ? ಯಾರಿಂದ? ಇಲ್ಲೊಂದು ಹೊಸ ಕೆಡುಕ ತಿಳಿಸುತಿರುವೆ.
ಮೀಡಿಯ— ಕ್ರೀಯಾನ್ ಕಾರಿಂಥಿನಿಂದೆನ್ನ ಗಡಿಪಾರು ಮಾಡುವನು.
ಐಜಿಯಸ್—. ಒಪ್ಪುವನೆ ಜೇಸನ್? ನಾ ಒಪ್ಪಲಾರೆನಿದನು.
ಮೀಡಿಯ— ನಟಿಸುವನು ಒಪ್ಪದಂತೆ, ಆದರೂ ಸಹಿಸುವನು ಅದನು.
ಆ! ಐಜಿಯಸ್, ನಿನ್ನ ದಾಡಿಯಾಣೆಗೆ ಬೇಡಿಕೊಳ್ಳುವೆನು,
ನಿನ್ನ ಮೊಣಕಾಲ ಹಿಡಿದು ದೀನ ಯಾಚಕಳಾಗಿ.
ಕರುಣೆ ತೋರಿಸು ಎನಗೆ, ನಿನ್ನ ಬಡ ನೇಹಿಗಳಿಗೆ.
ದಿಕ್ಕಿರದೆ ನಾನು ಗಡಿಪಾರಾಗಬಿಡದೆ,
ನಿನ್ನ ನಾಡಿಗೆ ನೇರ ನಿನ್ನ ಮನೆಗೇ ಎನ್ನ ನೀ ಕರೆದುಕೋ.
ನಿನ್ನೊಲವು, ದೇವತೆಯ ನೆರವಿಂದ, ದೊರಕಿಸಬಹುದು
ಸಂತಾನಲಾಭವನು, ನೀನೂ ಸಾಯಬಹುದು ನೆಮ್ಮದಿಯಲಿ.
ನೀನಿಲ್ಲಿ ಬಂದುದೆಂತಹ ಸುಯೋಗವೆನ್ನುವುದ ನೀನರಿಯೆ.
ನಿನ್ನ ಸಂತಾನಹೀನತೆಯ ಕೊನೆಗೊಳಿಸಿ, ಮಕ್ಕಳನು ಪಡೆವ ಶಕ್ತಿ
ನಿನಗೆ ಬರುವಂತೆ ಮಾಡುವೆನು. ಮಾಡಬಲ್ಲವು ಇದನು
ನಾ ಬಲ್ಲ ಔಷಧಗಳು.
ಐಜಿಯಸ್— ಹಲವು ಕಾರಣ, ಹೆಣ್ಣೆ, ಉಪಕಾರವಿದ ನಿನಗೆ
ಸಲ್ಲಿಸುವ ತವಕವಿಹುದೆನಗೆ, ಮೊದಲು, ದೇವತೆಗಳಿಗಾಗಿ;
ಬಳಿಕ ನೀನಿತ್ತ, ಭರವಸೆಯಂತೆ ಹುಟ್ಟಲಿಹ ಮಕ್ಕಳಿಗಾಗಿ.—
ಆ ವಿಷಯದಲ್ಲಂತು ದಿಕ್ಕೋರದಿಹುದೆನಗೆ.
ನನ್ನ ಸ್ಥಿತಿಯಾದರಿದು: ನೀನೆನ್ನ ನಾಡ ಮುಟ್ಟಿದರೆ
ನೆರವಾಗ ತೊಡಗುವೆನು, ನನ್ನ ಅಧಿಕಾರದೆಲ್ಲೆಯೊಳಗಿದ್ದು, ನಿನಗೆ.
ಆದರೂ ಮುಂದಾಗಿ ನಿನಗಿಷ್ಟು ಎಚ್ಚರಿಕೆ ನೀಡಲೇಬೇಕು;
ನನ್ನ ಜತೆಯಲಿ ನಿನ್ನನಿಲ್ಲಿಂದ ಒಯ್ಯುವುದಕೆ ನಾನೊಪ್ಪಲಾರೆ.
ನೀನಾಗಿ ನೀನು ಬರಬಲ್ಲೆಯಾದರೆನ್ನ ಮನೆಗೆ, ಸುರಕ್ಷಿತದಿ
ನೀನಲ್ಲಿ ನಿಲ್ಲಲಾಗುವುದು. ಯಾರಿಗೂ ನಾ ನಿನ್ನ ಬಿಟ್ಟುಕೊಡೆನು.
ಆದರೀ ನಾಡಿಂದ ನೀನು ಪಾರಾಗುವುದು ನಿನ್ನಿಂದಲೇ ಆಗಬೇಕು,
ಕೆಳೆಯರಾಕ್ಷೇಪಣೆಗೆ ಸಿಕ್ಕಲೆನಗಿಷ್ಟವಿಲ್ಲ.

ವೀಡಿಯು— ಅಂತೆಯೇ ಆಗಲಿ ಅದು ! ಇದಕೆ ನಿನ್ನಿಂದ ಅಭಿವಚನವೊಂದೆನಗೆ ಸಲ್ಲುವುದೆ,
ನಿನ್ನಿಂದ ನಾ ಬಯಸುವ ಸಮಸ್ತವೂ ಸಿಕ್ಕಿದಂತೆನಗೆ ಆಗ.

ಐಜಿಯಸ್— ನನ್ನ ನಂಬೆಯು ನೀನು ? ನಿನ್ನ ಕೊರಗಾದರೂ ಏನು ?

ವೀಡಿಯು— ನಂಬುವೆ ನಿನ್ನ. ಆದರೂ ಪೀಲಿಯಾಸ್ ಮನೆಯುವರು,
ಅಂತೆಯೇ ಕ್ರೀಯಾನನೂ, ದ್ವೇಷಿಸುವರೆನ್ನನು. ಈ ಪ್ರತಿಜ್ಞೆ
ನಿನ್ನ ಬಿಗಿದರೆ, ನಿನ್ನ ನಾಡಿಂದವರು ನನ್ನ ಸೆಳೆದೊಯ್ಯ್ಯಬಂದಾಗ
ನೀ ಬಿಟ್ಟುಕೊಡೆ. ಈ ನಮ್ಮ ಒಪ್ಪಂದ ದೇವತೆಗಳಾಣೆಯಿರದ
ಬರಿಮಾತಿನಲಿ ಇದ್ದರೆ, ಆಗ ನಿನ್ನ ಬಳಿ ಸಾಕನಿತು ಆಯುಧಗಳಿರದೆ,
ಅವರ ಕರೆಯನು ತಡೆವುದಾಗಲಾರದು ನಿನಗೆ, ನಾನಬಲೆ ;
ಅವರಿಗೋ ಐಶ್ವರ್ಯವಿದೆ, ಇದೆ ಒಂದು ದೊರೆಮನೆಯ ನೆರವು.

ಐಜಿಯಸ್— ಇಂಥ ಮಾತುಕತೆಯಲಿ ನಿನಗೆ ಮುಂಗಾಣ್ಕೆ ಹೆಚ್ಚೆಂದು ತೋರಿಸಿಹೆ ನೀನು.
ಸರಿಯೆ, ನಿನ್ನಿಷ್ಟವಂತಿರಲು ನಾ ನಿರಾಕರಿಸೆನದನು.
ಇದುವೆ ಬಲುನೆಮ್ಮದಿಯ ಹಾದಿಯಾಗುವುದೆನಗೂ ;
ನಿನ್ನ ಹಗೆಗಳಿಗೆ ಹೇಳಲು ಬರುವ ಏನಾದರೊಂದು ನೆವವೆನಗೂ ಇಹುದು ;
ಹೆಚ್ಚು ದೃಢವಹುದು ನಿನಗೂ, ನೀನು ಹೆಸರಿಸಬಹುದು ದೇವತೆಗಳ.

ವೀಡಿಯು— ತೊಡು ವಚನವನು,—ಧರೆಯು ಬಯಲ, ಎನ್ನ ತಂದೆಯ ತಂದೆ
ಹೀಲಿಯೋಸನ ಸಾಕ್ಷಿಯಾಗಿ, ಹೆಸರಿಸೆಲ್ಲ ದೇವತೆಗಳನೊಟ್ಟೈಸಲಿ.

ಐಜಿಯಸ್— ಎಂತು ಮಾಡುವೆನು, ಎಂತಲ್ಲವೆಂದು ತಾನೆ ? ನುಡಿ . . .

ಮೀಡಿಯು— ನೀನಾಗಿ ನೀನೆನ್ನ ನಿನ್ನ ನಾಡಿಂದೆಂದಿಗೂ ಹೊರಡಿಸುವುದಿಲ್ಲವೆಂದು,
ಅಥವಾ, ನನ್ನ ಹಗೆಗಳಲೊಬ್ಬ ನನ್ನನೊಪ್ಪಿಸು ಎಂದು ಕೇಳಿದರೆ
ನಿನ್ನ ಜೀವಮಾನದಲಿ ನಿನ್ನಿಷ್ಟದಿಂದೆನ್ನ ನೀನೊಪ್ಪಿಸುವುದಿಲ್ಲವೆಂದು.

ಐಜಿಯಸ್— ಧರೆಯಾಣೆ, ಹೀಲಿಯೋಸನ ಪವಿತ್ರ ಜ್ಯೋತಿಯಾಣೆ,
ಸಕಲ ದೇವತೆಗಳಾಣೆ, ನೀ ನುಡಿವ ಇದನು ಪಾಲಿಸುವೆನು.

ಮೀಡಿಯು— ಸಾಕು. ನೀನಿದಕೆ ತಪ್ಪಿದರೆ ನಿನಗೆ ಏನಾಗುವುದು ?

ಐಜಿಯಸ್— ಸ್ವರ್ಗವನು ಲೆಕ್ಕಿಸದ ಮಂದಿಗೇನೊದಗುವುದೊ ಅದು.

ಮೀಡಿಯು— ನೀ ನಿನ್ನ ದಾರಿ ನಡೆ ಇನ್ನು. ಒಳ್ಳಿತಾಗಲಿ. ತೃಪ್ತಳಾದೆ ನಾನು.
ಅದಷ್ಟು ಬೇಗ ನಾ ನಿನ್ನ ಪಟ್ಟಣಕೆ ಬಂದು ಸೇರುವೆನು,
ಮಾಡಬೇಕಾದುದನು ಮಾಡಿ ಮುಗಿಸಿ, ಎನ್ನ ಗುರಿ ಸಾಧಿಸಿ.

[ಐಜಿಯಸ್ ನಿರ್ಗಮಿಸುತ್ತಾನೆ.]

ಮೇಳ— ಬೆಂಗಾವಲಾಗಿ ಪಾಂಥರ ದೇವ ಹರ್ಮೀಸ್
ನಿನ್ನನೊಯ್ಯಲಿ ನಿನ್ನ ಮನೆಗೆ!
ಉದಾರಿ ನೀನೆಂದೆನಗೆ ತೋರುತಿದೆ, ಏಜಿಯಸ್
ನಿನ್ನ ಕಟ್ಟಭಿಲಾಷೆ ಕೈಗೂಡಲಿ!

ಮೀಡಿಯ— ದೇವರು, ದೇವದುಹಿತೆ ನ್ಯಾಯದೇವತೆ, ಸೂರ್ಯನ ದೇವನ ಬೆಳಕು!
ಈಗ, ಕೆಳೆಯರೆ, ಬಂದಿದೆ ವೇಳೆ ವೈರಿಗಳ
ಮೆಟ್ಟಿ ಮೆರೆಯಲು. ಈಗೆನ್ನ ಹೆಜ್ಜೆ ಗೊದಗಿದೆ ಹಾದಿ.
ಈಗವರು ದಂಡ ತೆರುವುದು ಗಟ್ಟಿಯಾಯ್ತೆನಗೆ.
ಎನ್ನ ಹಂಚಿಕೆಗಳಲಿ ಅತಿಕಷ್ಟವಾದೆಡೆಯಲ್ಲಿ
ಎನಗೀತ ಏಜಿಯಸ್ ರೇವಿನಂತಾಗಿಹನು.
ಬಿಗಿಯಬಲ್ಲೆನು ಅವನಿಗೆನ್ನ ನೆಮ್ಮದಿಯ ಹಡಗು-ಹಗ್ಗವನು
ಪಲ್ಲಸ ಪುರದ ದುರ್ಗವನು ನಾ ಸೇರಿದಾಗ.
ನಿಮಗೆನ್ನ ಹಂಚಿಕೆಯನಿಡಿಯಾಗಿ ನುಡಿವೆನೀಗ.
ವ್ಯರ್ಥವಲ್ಲದೀ ನುಡಿಗಳನು ಕೇಳಿ:
ಕಳಿಸುವೆನು ಜೇಸನ್ನನೆಡೆಗೆ ಆಳೊಬ್ಬನನು, ಕಂಡು ಕೋರಲು
ಇನ್ನೊಮ್ಮೆ ಅವನೆನಗೆ ಕಾಣಿಸಿಕೊಳ್ಳುವಂತೆ.
ಅವನು ಬಂದಾಗ ಮಿದುನುಡಿಗಳನೆ ಅವಗೆ ನುಡಿವೆನು.
ನುಡಿವೆನು: ಅವನು ಗೈದುದಕೆನ್ನ ಸಮ್ಮತಿಯಿಹುದೆಂದು,
ಎನಗೆರಡು ಬಗೆದು, ದೊರೆಮಗಳ ತಂದುದೆನಗೂ ಒಪ್ಪಿತವೆಂದು.
ಶ್ರೇಷ್ಠ ಯೋಚನೆ; ಲಾಭವಾಯ್ತುದರಿಂದ ಎನ್ನುವೆನು.
ಬೇಡುವೆನಾದರೆ, ಎನ್ನ ಮಕ್ಕಳನಿಲ್ಲೆ ಉಳಿಸಿಕೊಡು, ಎಂದು.
ಹಗೆಗಳವಹೇಳನವನನುಭವಿಸಲೆಂದೆನ್ನ ಮಕ್ಕಳನು, ಇಲ್ಲಿ
ಎನ್ನ ದ್ವೇಷಿಸುವ ಈ ನಾಡಿನಲಿ ಬಿಡುವೆನು ಎಂದಲ್ಲ,—
ಉಪಾಯದಲಿ ದೊರೆಮಗಳ ಕೊಲ್ಲಲೊದಗುವಂತೆ.
ಉಡುಗೊರೆಗಳನು ಹಿಡಿದ ಮಕ್ಕಳನು ಕಳಿಸುವೆನು,
ವಧುವಿನೆಡೆಗೆ, ಗಡಿಪಾರು ಅವರ ಮಟ್ಟಿಗೆ ತಪ್ಪಲೆಂದು,—
ಸೊಗಸಾಗಿ ನೆಯ್ದ ಉಡುಗೆಯನು, ಮೆರೆವ ಚಿನ್ನದ ಕಿರೀಟವನು.
ಅವಳು ಅವುಗಳ ಕೊಂಡು ಮೈಮೇಲೆ ಧರಿಸಿದರೆ
ಅವಳೂ, ಅವಳ ಮುಟ್ಟಿದೆಲ್ಲರೂ ಸಾಯುವರು ನರಳಿ.
ಲೇಪಿಸುವೆನಂಥ ವಿಷವನು ನಾ ಕಳಿಸುವುಡುಗೊರೆಗೆ.
ಆದರದನು ಮುಗಿಸಬೇಕಲ್ಲಿಗೆ, ಸಾಲ ಸಂದುದೆಂದು.
ಆ ಬಳಿಕ, ನಾ ಮಾಡಬೇಕಾಗಿ ಬಂದಿರುವ ಕೆಲಸವನು ನೆನೆದರೇ
ಅಳು ಬರುವುದೆನಗೆ. ನಾನೆನ್ನ ಮಕ್ಕಳನು ಕೊಲ್ಲುವೆನು,
ಎನ್ನ ಮಕ್ಕಳನು. ಅವರ ರಕ್ಷಣೆಗಿಲ್ಲವಾರೂ.

ಬಳಿಕ ಜೇಸನ್ನನೀ ಮನೆ ಮಠ ಸಮಸ್ತವನು ನಾಶಮಾಡಿ
ನಾಡ ಬಿಡುವೆನು, ಕಾಣ್ಕೆಗಿವೆನೆನ್ನ ಮುದ್ದುಮಕ್ಕಳ
ಕೊಲೆಯಿಂದ, ಘೋರ ಕೃತ್ಯವನೊಂದನೆನಗಿ.
ಹಗೆಯ ಹೀಯಾಳಿಕೆಯು ಸಹಿಸಲಾಗದು ; ಅದಕೆ,
ಇದು ಆಗಲೇ ಬೇಕು. ಫಲವೇನೆನಗೆ ಬದುಕಿ ?
ನಾಡಿಲ್ಲ, ಮನೆಯಿಲ್ಲ, ನೆರಳಿಲ್ಲವೆನಗೆ ನೋವಿನಲಿ.
ಆಯ್ತು, ನನ್ನದು ತಪ್ಪು, ಎಂದು ನಾನೆನ್ನ ತಂದೆಯ ಮನೆಯ ಹಿಂದೆ ಬಿಟ್ಟು,
—ದೇವಬಲವಿರಲು—ಅದಕೆ ಬೆಲೆ ತೆರುವೆನೆಂದ
ಗ್ರೀಕನೊಬ್ಬನ ನುಡಿಯ ನಂಬಿದೆನೊ ಅಂದು.
ಎನ್ನಲ್ಲಿ ತನಗಾದ ಈ ಮಕ್ಕಳನು ಇನ್ನು
ಜೀವದೊಂದಿಗೆ, ಕಾಣಲಾರ ಇವನು. ತನ್ನ ಹೊಸ ಮಡದಿಯಲಿ
ಮಗುವೊಂದಕೂ ತಂದೆಯಾಗಲಾರನಿವ. ಈ ನನ್ನ ವಿಷಗಳಿಂ-
ದತಿ-ಘೋರ ಮಿತ್ತುವಿಗೆ ತುತ್ತಾಗಿ ಸಾಯಬೇಕವಳು !
ತಿಳಿಯದಿರಲಾರೂ ನಾನಬಲೆ, ದುರ್ಬಲ ಸತ್ತ್ವಳೆಂದು,
ಮನೆಗಂಟಿಯೆಂದು. ತಿಳಿಯಲಿ ತದ್ವಿರುದ್ಧವೆ ಎಂದು.
ಹಗೆಯ ನೋಯಿಸಲೂ, ಕೆಳಗೆ ನೆರವೀಯಲೂ ಬಲ್ಲಳೆಂದು,
ಅಂಥವರ ಬದುಕನೇ ಅತಿಯಾಗಿ ನೆನೆಯುವುದು ಲೋಕ.

ಮೇಳ— ನಿನ್ನ ಹಂಚಿಕೆಗಳನು ನಮಗೆ ತಿಳಿಸಿ, ಪಾಲ್ಗೊಂಡೆಯಾಗಿ ಎಮ್ಮೊಡನೆ
ನಾ ನಿನಗೆ ನೆರವಾಗಬಯಸುವೆನು, ನಾಡಾಡಿ ನಡತೆಗಳಿಗೆ
ಬೆಂಬಲವ ನೀಡುವೆನು, 'ಮಾಡದಿರು ಇದನೆ'ಂದು ನಿನಗೆ ಹೇಳುವೆನು.

ಮೀಡಿಯ— ಮಾಡಲಾರೆನು ಬೇರೆ ಏನನೂ. ನೀನಿಂತು ನುಡಿಯುವುದು
ನನಗರ್ಥವಾಗುವುದು. ನನ್ನಂತೆ ನೋವು ಪಟ್ಟವಳಲ್ಲ ನೀನು.

ಮೇಳ— ನಿನ್ನೊಡಲ ಕಂದಗಳ ಕೊಲಲು ನಿನಗೆ ಮನಸು ಬಹುದೆ ?

ಮೀಡಿಯ— ಹೌದು, ಎನ್ನ ಗಂಡನ ಗಾಯಗೊಳಿಸಲ್ಕೆ ಇದುವೆ ಉತ್ತಮದ ಮಾರ್ಗ.

ಮೇಳ— ಇನ್ನೂ ನೀನು ನೊಂದುಕೊಳುವೆ. ಹೆಣ್ಗಳಲಿ ಅತಿದುಃಖಿ ನೀನಾಗುವೆ.

ಮೀಡಿಯ— ಅಂತಾಗಲೇ ಬೇಕು. ಮಧ್ಯವರ್ತನೆ ಯಾವುದೂ ಶಕ್ಯವಿಲ್ಲ.

[ದಾದಿಯ ಕಡೆಗೆ ತಿರುಗುತ್ತಾಳೆ.]

ಹೋಗು, ನೀನೀಗಲೇ ಹೇಳು ಜೇಸನ್ನನಿಗೆ, ಬರುವಂತೆ ನನ್ನ ಬಳಿಗೆ.
ಪರಮಾಪ್ತ ಕಾರ್ಯಗಳಿಗೆಲ್ಲ ನಾ ಹೂಡುವುದು ನಿನ್ನನೇ.
ನಿನ್ನೊಡತಿಯಲಿ ನಿನಗೆ ಒಲವಿರುವುದಾಗೆ, ಹೆಣ್ಣಾಗಿ ನೀ ಹುಟ್ಟಿದವಳಾಗೆ,
ನಾ ಗೈದ ನಿರ್ಧಾರಗಳ ಕುರಿತು ಏನನೂ ನುಡಿಯದಿರಬೇಕು ನೀನು.

ಮೇಳ— ಹಳಗಾಲದಿಂದಲೂ ಎರೆಕ್‌ಥಿಯೂಸ್ ವಂಶಜರು
ತೇಜಸ್ವಿಗಳು, ಧನ್ಯ ದೇವತಾಪುತ್ರರು. ನೆಲಸಿಹರು ಅವರು

ಅಥೆನ್ಸಿನ ಅಜಿತ, ಪವಿತ್ರ ಭೂಮಿಯಲ್ಲಿ. ಅಲ್ಲಿ
ಹೆಸರಾಂತ ಜ್ಞಾನದೇವಿ ಉಣಿಸನೀಡುವಳವರಿಗೆ.
ಯಾವೆಡೆ ಸುವರ್ಣಮಯ ಸಮರಸತೆ ಪಯಿರಿಯದ
ಅಚ್ಚ ಕಲೆಯರಸಿಯರಸೊಂಬತ್ತು ಮಂದಿಯನು ಹೆತ್ತಳೆನ್ನುವರೊ,
ಅಲ್ಲಿ ಸಂತಸದಿಂದ ಸರ್ವದಾ ಚಲಿಸುವರು ಅವರು,
ಆ ಬಲು ಬೆಳಕಿನಾಗಸದಲಿ.
ನೀರ ಸೇದಲು ದೋಣಿಯಲ್ಲಿ ಸೈಪ್ರಿಸ್ ಬರುವಳೆನ್ನುವರು ಅವರು,
ಸೆಫಿಸೊಸಿನ ಸ್ವಾದುಪ್ರವಾಹದ ಬಳಿಯಲಿ.
ಎಳೆಯ ಮಿದುಗಾಳಿಗಳ ಉಸಿರು ಅವಳ ದಾರಿಯಲಿ;
ಅರಿವಿನೊಡನಾಡಿಗಳು, ಅವಳ ಬೆಂಗಾವಲವರೆಲ್ಲ ಮೇಲ್ಮೆಗಳಲ್ಲಿ ನರರಿಗೆ
ನೆರವಾಗುವವರು, ಕಾದಲರು ಮೇಲೆಸೆದ
ಗುಲಾಬಿಯ ಸುಗಂಧಮಾಲೆಗಳವಳ ಕುರುಳಿನಲಿ.
ಇನ್ನೆಂತು ನಿನ್ನ ಪ್ರೀತಿಸಬಲ್ಲವೀ
ಪುಣ್ಯನದಿಗಳು, ಪುಣ್ಯಭೂಮಿ,
ನೆಲೆಗೊಡುವುದೀ ನಗರ ನಿನಗೆ
ನಿನ್ನ ಮಕ್ಕಳ ಕೊಲುವ ನಿನಗೆ,
ಉಳಿದರೊಲು ಶುದ್ಧಳಾಗಿರದ ನಿನಗೆ, ?
ಓ ಯೋಚಿಸು ನಿನ್ನ ಮಕ್ಕಳಿಗಿಡುವ ಪೆಟ್ಟನು,
ಯೋಚಿಸು ನೀನು ಸುರಿಸುವ ನೆತ್ತರ.
ಮರಳಿ ಮರಳಿ ನಾನು ಓ ನಿನ್ನ ಬೇಡುವೆನು
ನಿನ್ನ ಮೊಣಕಾಲ ಬಾಚಿ, ಬೇಡುವೆನು ಆಗದಿರು
ನೀ ನಿನ್ನ ಕಂದಗಳ ಕೊಲೆಪಾತಕಿ.
ಧೈರ್ಯ ಬಹುದೆಲ್ಲಿಂದ ನಿನಗೆ,
ಕೈಚಳಕ, ಮನದ ಚುರುಕು
ಹೂಡಿಕೊಂಡಾಗ ನೀನೇ ನಿನ್ನನಂಥ
ಘೋರಕ್ಕೆ ಕೈಹಾಕಲು ?
ಕೊಲೆಯ ನಿರ್ಧಾರವನು, ಕಣ್ಣು ನೀರಿಡದೆಯೆ,
ನಡಸಬಲ್ಲೆಯ ನೀನು ? ನಡಸಲಾರೆ,
ನಿನ್ನ ಮಕ್ಕಳು ಬಿದ್ದು ಬೇಡಿ ಬಾಯ್ಬಿಡುವಾಗ
ಧೃತಿಗೆಡದೆ ಅವರ ನೆತ್ತರಲಿ ಕೈಯದ್ದುವುದು
ನಿನ್ನಿಂದ ಆಗಲಾರದು.

[ಜೇಸನ್ನನ ಪ್ರವೇಶ, ಸೇವಕರೊಂದಿಗೆ.]

ಜೇಸನ್— ನಿನ್ನ ಕೋರಿಕೆಯಂತೆ ಬಂದಿಹೆನು. ವಾಸ್ತವವಾಗಿ, ಎನ್ನ ಕಂಡರೆ

ನಿನಗಾಗದು, ಆದರೂ ಸಲ್ಲತಕ್ಕುದು : ನಿನಗಿದು ಹೆಣ್ಣೆ,
ನನ್ನಿಂದ ಹೊಸತೇನ ಪಡೆಯಬಯಸುವೆ ನೀನು ? ಹೇಳು, ಕೇಳುವೆನು.

ಮೀಡಿಯ— ಜೇಸನ್, ನಿನ್ನ ಬೇಡುವೆ ನಾನು ಆಡಿದ ಮಾತಿಗಾಗಿ
ಎನ್ನಲ್ಲಿ ಕ್ಷಮೆಯಿರಲಿ ಎಂದು. ಸಹಜವಾಗಿದೆ ನಿನಗೆ, ಎನ್ನ ಸಿಡುಕನು
ಸೈರಿಸುವುದು ; ಒಡಗೂಡಿ ಬಹುಪ್ರೀತಿಯುಂಡವರು ನಾವಷ್ಟೆ!
ನನ್ನಲ್ಲೆ ನಾನಾಡಿಕೊಂಡಿಹೆನಿದನು ಕುರಿತು. ನನ್ನ ನಾನೆ
ಬೈದುಕೊಂಡಿಹೆನು ; 'ಪೆದ್ದಿ' ಎಂದೆನು ; ಈ ಹುಚ್ಚು ಎನಗೇಕೆ ?
ವಿವೇಕದಲಿ ಹಂಚಿಕೆಯ ಹೂಡಿದವರಿಗೆ ಎನ್ನ ವಿರೋಧವೇಕೆ ?
ನಾನಾಗಿ ಹಗೆಯಾಗುವುದದೇಕೆ ಅಧಿಕಾರಿಗಳಿಗೆ,
ಎನ್ನ ಪರಮಹಿತವನು ದುಡಿಯೆ
ತಾನು ದೊರೆಮಗಳ ಕೈಹಿಡಿದು ಎನ್ನ ಮಕ್ಕಳಿಗೆ
ತಮ್ಮದಿರಾಗಲಿರುವ ಮಕ್ಕಳನು ಪಡೆವ ಎನ್ನ ಗಂಡನಿಗೆ ?
ಕೋಪವನು ಬಿಡುವೆ, ದೇವರ ಕರುಣೆ ಎನ್ನ ಮೇಲಿಹುದು.
ಮಕ್ಕಳಿಲ್ಲವೆ ನನಗೆ ? ನಮ್ಮ ಗಡಿಪಾರಿನವಧಿಯಲೆಮಗೆ
ನೇಹಿಗರು ಕೊರೆಯಹುದು ತಿಳಿಯದೇ ಎನಗೆ ?
ಇದನು ಅರಯ್ದಾಗ ಕಂಡಿತೆನಗೆ ಎನ್ನ
ತಿಳಿಗೇಡಿತನ,—ಎನ್ನ ಕೋಪದ ಮೌಢ್ಯ. ಈಗ
ನೀನೆಂದುದಕ್ಕೆನ್ನ ಸಮ್ಮತಿ. ಜಾಣನೆಂದರಿವೆ ನಿನ್ನನು,
ನನ್ನ ಜತೆಗೀ ಮಡದಿಯಿನ್ನೊಬ್ಬಳನು ನೀನು ತಂದುದಕ್ಕೆ.
ಹುಚ್ಚು ಹಿಡಿದಿತ್ತು ನನಗೆ. ನಿನ್ನ ಈ ಹಂಚಿಕೆಗಳಲ್ಲಿ ನಿನಗೆ
ಒದಗಬೇಕಿತ್ತು ನಾನು ;
ಸೇರಬೇಕಿತ್ತು ಮದುವೆಯಲಿ ; ನಿಲ್ಲಬೇಕಿತ್ತೊಸಗೆ ಹಾಸುಗೆಯ ಬಳಿಯೆ ;
ಸಂತಸಗೊಳ್ಳಬೇಕಿತ್ತು ನಿನ್ನ ವಧುವಿಗುಪಚಾರ ಗೈವುದರಲ್ಲಿ,
ಆದರೂ ಈ ನಾವು ಹೆಂಗಸರು ಹೆಂಗಸರೆ,—ತುಸು
ಅಯೋಗ್ಯರೂ ಇರಬಹುದು, ಗಂಡಸರು ನೀವು ಈ ವಿಷಯದಲಿ
ನಮ್ಮಂತೆ ಆಗಬಾರದು. ಹೆಡ್ಡರಾಗಿರೆ ನಾವು, ನೀವೂ
ಪ್ರತಿ ಹೆಡ್ಡರಾಗಬಾರದು.
ನಾನೀಗ ಸೋತೆ ; ಆಗ ತಪ್ಪಿದೆನೆಂದು ಒಪ್ಪಿಕೊಳ್ಳುವೆ ;
ನನಗೀಗ ಚೆನ್ನಾಗಿ ತಿಳಿವು ಬಂದಿದೆ.

[ಮನೆಯ ಕಡೆಗೆ ತಿರುಗುತ್ತಾಳೆ.]

ಮಕ್ಕಳಿರ, ಬನ್ನಿ ಇಲ್ಲಿಗೆ, ಎನ್ನ ಮಕ್ಕಳಿರ, ಬನ್ನಿ ಹೊರಗೆಮ್ಮ ಬಳಿಗೆ!
ಸ್ವಾಗತಿಸಿ ನಿಮ್ಮ ತಂದೆಯನು ಎನ್ನೊಂದಿಗೆ ; 'ಹೋಗಿ ಬರುವೆವು'
ಎಂದು ಹೇಳಿ.

ಬಳಿಕ ಈ ತನಕ ಅವನಿಗೆ ಶತ್ರುವಾಗಿದ್ದ ನಿಮ್ಮ ತಾಯೊಡನೆ ಮತ್ತೆ
ಕೂಡಿಕೊಳಿ ಎಮ್ಮ ಪ್ರೀತಿಸುವ ಅವನೊಡನೆ ಸ್ನೇಹವನು
ಬೆಳಸಿಕೊಳಲು.

[ಮಕ್ಕಳ ಪ್ರವೇಶ, ಶಿಕ್ಷಕನೊಂದಿಗೆ.]

ನಮ್ಮೊಳಗೆ ಶಾಂತಿಯಾಯಿತು, ಸಿಟ್ಟೆಲ್ಲ ಮುಗಿದುಹೋಯಿತು.
ಅವನ ಬಲಗೈಯ ಹಿಡಿಯಿರಿ—ಓ ದೇವರೆ, ಯೋಚಿಸುತ್ತಿಹೆನು
ರಹಸ್ಯ ಭವಿಷ್ಯವೊಂದರಲ್ಲಾಗಬಹುದಾದ ಏನನೋ ಕುರಿತು.
ಓ ಮಕ್ಕಳಿರ, ನೀವಿದೇ ಪರಿಯಲಿ, ನಿಡುಗಾಲ ಬಾಳಿದ ಮೇಲೆ
ನಿಮ್ಮ ಪ್ರಿಯಬಾಹುಗಳ ಚಾಚುವಿರ ಗೋರಿಯ ಬಳಿ? ಓ ಮಕ್ಕಳಿರ,
ಎಷ್ಟು ಸಿದ್ಧಳು ನಾನು ಅಳಲು, ಎಷ್ಟು ತುಂಬಿವೆ ಅರಿಷ್ಟ ಸೂಚನೆಗಳು!
ಈ ನಿಮ್ಮ ತಂದೆಯೊಡನೆನಗಿದ್ದ ಕಲಹವನು ನಾನೀಗ ಮುಗಿಸುತಿಹೆನು,
ಎನ್ನ ಮಿದುಗಣ್ಣಳಲಿ ಇದ್ದಕಿದ್ದಂತೆ ಕಣ್ಣೀರು ತುಂಬಿಹುದ ನೋಡಿ.

ಮೇಳ— ಕಂದಿದ ಕಂಬನಿ ಮೊದಲಾಗಿರುವುದು ಎನ್ನಯ ಕಂಗಳಲೂ;
ಕಷ್ಟ ತಾನೀಗಲೆ ಇರುವುದಕಿಂತಲು ಇನ್ನಷ್ಟು ಹೆಚ್ಚಾಗದಿರಲಿ!

ಜೇಸನ್— ಮೆಚ್ಚುವೆನು ನಿನ್ನ ಮಾತಿಗೆ. ಅಲ್ಲದೆಯೊ, ಹಿಂದೆ ನೀನೆಂದುದಕು
ನಾ ನಿನ್ನ ದೂರಲಾರೆ. ಅದು ಸಹಜ,
ಹೆಂಗಸಿಗೆ ಕೋಪವೇರುವುದು, ತನ್ನ ಪತಿ ಇನ್ನೊಬ್ಬಳನು
ಕದ್ದು ಪ್ರೀತಿಸುವಾಗ; ಈಗಲೋ ನಿನ್ನ ಬುದ್ಧಿ ತಿರುಗಿದೆ ಅರಿತು
ಮೇಲ್ತರದ ಯುಕ್ತಿಯನು. ಕಡೆಯಲಿ ನೀನು ಬಂದಿರುವೆ
ಸೂಕ್ತ ನಿರ್ಧಾರಕ್ಕೆ, ನಿನ್ನಂಥ ಜಾಣೆಗೊಪ್ಪುವ ರೀತಿಯಲ್ಲಿ.
ಮಕ್ಕಳಿರ, ನಿಮ್ಮ ಸಲಹುವ ಹೊಣೆಯ ಹೊತ್ತ ನಿಮ್ಮಯ್ಯ—
—ದೈವ ನೆರವಾಗುತಿರೆ—ನಿಮಗೆ ವಿಪುಲಾನುಕೂಲಗಳನೊದಗಿಸಿಹನು.
ನಿಮ್ಮ ತಮ್ಮದಿರೊಡನೆ ನೀವು ಕಾರಿಂಥಿನಲೆ
ಮುಂದಾಳ್ಗಳಾಗುವ ಕಾಲ ಬರುವುದೆಂಬುದು ಎನ್ನ ಎಣಿಕೆ.
ನೀವು ಬೆಳೆಯಬೇಕು. ಮುಂದಾಗುವುದ ನಿಮ್ಮ ತಂದೆಯೂ
ಅವನಲ್ಲಿ ಅಭಿಮಾನವಿಹ ದೇವತೆಗಳೂ ನೋಡಿಕೊಳುವರು.
ಗಟ್ಟಿಗರು, ದೃಢಕಾಯರು, ಎನ್ನ ಹಗೆಗಳಿಂತ ಮೇಲ್ತರದ
ತರುಣರಾಗುವುದ ನೀವು, ನೋಡಲೆನಗಭಿಲಾಷೆ.
ಕುಂದಿ ಅಶ್ರುಗಳಿಂದ ತೇವವಾಗಿಹವೇಕೆ ನಿನ್ನ ಕಣ್ಣುಗಳು, ಮೀಡಿಯ?
ಏಕಷ್ಟು ಬಿಳುಪು, ನನ್ನ ಕಡೆಗೇಕೆ ತಿರುಗದು ನಿನ್ನ ಕೆನ್ನೆ?
ಪ್ರಿಯವಲ್ಲವೇ ನಿನಗೆ ಕೇಳಲೆನ್ನೀ ನುಡಿಗಳು?

ಮೀಡಿಯ— ಏನಿಲ್ಲ. ನನ್ನ ಮಕ್ಕಳ ಕುರಿತು ಯೋಚಿಸುತ್ತಿದ್ದೆ.

ಜೇಸನ್— ಹರ್ಷದಿಂದಿರಬೇಕು ನೀನು. ಚೆನ್ನಾಗಿ ನಾನವರ ನೋಡಿಕೊಳ್ಳುವೆನು.

ಮೀಡಿಯ— ಇರುವೆನು. ನಿನ್ನ ನುಡಿಗಳಲಿ ನಂಬಿಕೆ ಇಲ್ಲವೆಂದಲ್ಲ;
ಆದರೆ ಹೆಣ್ಣು ನಾಜೂಕು ವಸ್ತು; ಒಲು ಅಳುವಿನ ಕಡೆಗೆ.

ಜೇಸನ್— ಆಯಿತು. ನೀನೇಕೆ ಅಳಬೇಕು ಇಷ್ಟನು, ಈ ಮಕ್ಕಳ ಬಗೆಗೆ?

ಮೀಡಿಯ— ನಾನವರ ತಾಯಿ. ಅವರು ಬದುಕಲಿ ಎಂದು ನೀನು ಪ್ರಾರ್ಥಿಸಿದಾಗ
ದುಃಖವಾಯ್ತೆನಗೆ ಯೋಚಿಸಲು ಈ ಘಟನೆಗಳು ನಡೆವುವು ಎಂದು.
ನಿಜವಿದು. ನಾ ನಿನಗೆ ಹೇಳಲುದ್ದೇಶಿಸಿದ ಕೆಲವನಾಗಲೇ ನಿನಗೆ
ಹೇಳಿರುವೆ, ಉಳಿದುದನು ಈಗ ಹೇಳುವೆನು.
ಇಲ್ಲಿಂದಲೆನ್ನ ಹೊರಗಟ್ಟುವುದು ರಾಜಸಂಕಲ್ಪ, ನಾನೂ ಬಲ್ಲೆ :
ತಾವೆನಗೆ ಆಗದವರೆಂದು ನನ್ನೆಣಿಕೆಯೆಂದವರು ತಿಳಿದಿರಲು
ನಿನ್ನ ಹಾದಿಯಲಾಗಲಿ ರಾಜನ ಹಾದಿಯಲಾಗಲಿ
ತಡೆಯಾಗಿ ನಾನಿಲ್ಲಿ ನಿಲ್ಲದಿರುವುದೆ ಮೇಲು ಎನಗೂ.
ಅದಕಾಗಿ ಈ ನಾಡ ತೊರೆದು ಹೋಗುವೆ ನಾನು.
ಆದರೂ ನೀನು, ಅವರ ಸಾಕುವ ನಿನ್ನ ಹೊಣೆಯ ಸಲುವಾಗಿ,
ಕ್ರೀಯಾನಿನಲಿ ಬೇಡಿಕೊಳುವೆಯ, ಮಕ್ಕಳನು ಅಟ್ಟದಿರೆಂದು?

ಜೇಸನ್— ಫಲ ಹೇಗೊ ಕಾಣೆ, ನಾನೇನೊ ಯತ್ನಿಸುವೆನು.

ಮೀಡಿಯ— ಗಡಿಪಾರಿನಿಂದ ಮಕ್ಕಳ ಹೊರತುಮಾಡೆಂದು ತಂದೆಯಲಿ ಬೇಡುವಂತೆ
ನೀ ನಿನ್ನ ಮಡದಿಯನು ಕೇಳಬೇಕು.

ಜೇಸನ್— ಕೇಳುವೆನು. ಅವಳ ಬಳಿಯಲಿ ಎನಗೆ ಖಂಡಿತ ಗೆಲವು.

ಮೀಡಿಯ— ನಮ್ಮ ಈ ಉಳಿದ ಹೆಂಗಸರಂತೆ ಅವಳಾಗೆ, ಗೆಲುವೆ ನೀನು.
ಈ ಕಾರ್ಯದಲಿ ಕೈಯಿಡುವೆ ನಾನೂ ನಿನ್ನ ಜತೆಗೆ.
ಜನಮೆಚ್ಚುಗೆಯ, ಎಲ್ಲಕ್ಕು ರಮ್ಯವಾದ
ಕೆಲವು ಉಡುಗೊರೆಗಳನು ಕಳಿಸುವೆನು ನಾನವಳಿಗೆ,
ಸೊಗಸಾಗಿ ನೆಯ್ದ ಉಡುಗೆಯನು, ಹೊನ್ನಿನ ಕಿರೀಟವನು.
ಮಕ್ಕಳವನೊಯ್ದು ಒಪ್ಪಿಸುವುವವಳಿಗೆ. ಬೇಗ, ಆಳುಗಳೆ,
ಹೋಗಿ ನಿಮ್ಮಲ್ಲಿ ಒಬ್ಬಳು, ತರಲಿ ಇಲ್ಲಿಗಾ ಚೆಲುವಿನುಡುಗೆಯನು.

[ಅವಳ ಆಳುಗಳಲ್ಲೊಬ್ಬಳು ಮನೆಯೊಳಗೆ ಹೋಗುತ್ತಾಳೆ.]

ಅವಳು ಸುಖಿಯಾಗುವುದು ಒಂದು ಬಗೆಯಲ್ಲಲ್ಲ, ಒಂದು ನೂರರಲಿ,
ಹಾಸುಗೆಯ ಪಾಲುಗಾರಿಕೆಗೆ ಒಬ್ಬ ನಿನ್ನಂಥ ಸೊಗಸಾದ ಪುರುಷ-
ನಿರುವಾಗ,
ನನ್ನ ತಂದೆಯ ತಂದೆ ಹೀಲಿಯೋಸ್ ತನ್ನ ಸಂತತಿಗೆ ನೀಡಿದ
ಈ ಚೆಲ್ವಿನುಡುಗೆಯನವಳು ಉಟ್ಟ ಬಳಿಕ.

[ವಿಷವಸ್ತ್ರ ಕಿರೀಟಗಳನ್ನು ಹಿಡಿದ ಆಳಿನ ಪ್ರವೇಶ]

ಮಕ್ಕಳಿರ, ಅಲ್ಲಿ, ಈ ಮದುವೆಯುಡುಗೊರೆಗಳನು ನಿಮ್ಮ ಕೈಗಳಿಗೆ
ಕೊಳ್ಳಿರಿ.

ಸುಖಿ ವಧುವಿಗಾ ರಾಜಪುತ್ರಿಗವುಗಳನೊಯ್ಯಿರಿ,
ಅವಳಿಗೆ ಕೊಡಿ. ಕಡೆಗಣಿಸಲಾರಳು ಅವುಗಳನವಳು.

ಜೇಸನ್— ಹೆಡ್ಡಳಾಗದಿರು. ಬರಿಗೈಯ ಮಾಡಿಕೊಳ್ಳದಿರು ಇದನಿತ್ತು.
ಉಡಲು ವಸ್ತ್ರಗಳಿಲ್ಲ ಅರಮನೆಲೆನ್ನುವೆಯ?
ಅಲ್ಲಿಲ್ಲ ಚಿನ್ನವೆನ್ನುವೆಯ? ಇಟ್ಟುಕೊ, ಕೊಡಬೇಡವದನು.
ಮಡದಿಯೆಣಿಕೆಯಲಿ ಬೆಲೆಯಿದ್ದರೆನಗೆ
ಹಣಕಿಂತ ನಾನು ಹೆಚ್ಚವಳಿಗೆ. ನನಗಿದು ಗೊತ್ತು.

ಮೀಡಿಯ— ಆಗದು. ನನಗೆ ನನ್ನದೆ ದಾರಿ. ಹೇಳುವರು, ದೇವತೆಗಳೇ
ಒಲಿವರು ಕೊಡುಗೆಗೆಂದು. ಮಾತಿಗಿಂತಲು ಹೊನ್ನ
ಪರಿಣಾಮ ಹೆಚ್ಚಿನದು ಮಾನವರ ಮೇಲೆ.
ಇಲ್ಲಿದೆ ಅದೃಷ್ಟ, ದೇವತೆ ಅವಳಿಗೀವ ವರ.
ಅವಳು ಚಿಕ್ಕವಳು, ದೊರೆಯ ಮಗಳು; ಆದರೂ ನನ್ನ ಮಕ್ಕಳ
ಶಿಕ್ಷೆಯನು ತಪ್ಪಿಸಲು
ಚಿನ್ನವೇ ಏಕೆ, ಕೊಡುವೆನು ಎನ್ನ ಪ್ರಾಣವನೆ.
ಹೋಗಿ ಮಕ್ಕಳಿರ, ಹೋಗಿ ಒಟ್ಟಿಗೆ ಸಿರಿತುಂಬಿದರಮನೆಗೆ.
ನಿಮ್ಮ ತಂದೆಯು ಹೊಸ ಮಡದಿಯಲ್ಲಿ, ದೈನ್ಯದಲಿ ಯಾಚಿಸಿ
ಎನ್ನೊಡತಿಯಲ್ಲಿ, ನಿಮ್ಮನ್ನು ಗಡಿಪಾರು ಮಾಡಿಸದಂತೆ.
ವಸ್ತ್ರವನು ಕೊಡಿ ಅವಳಿಗೆ; ಬಹುಮುಖ್ಯವಿದು—
ತನ್ನ ಕೈಗಳಲವಳು ನಿಮ್ಮಿಂದ ಉಡುಗೊರೆ ಕೊಳ್ಳುವುದು.
ಹೋಗಿ ಶಕ್ಯವಾದಷ್ಟು ಬೇಗ; ಒಸಗೆಯ ತನ್ನಿ ನಿಮ್ಮ ತಾಯ್ಗೆ,
ಏನ ಸಾಧಿಸಲವಳು ಹಂಬಲಿಸುತಿರುವಳೋ ನೀವದನು ಗೆದ್ದು.

[ಜೇಸನ್ ತನ್ನ ಸೇವಕರೊಂದಿಗೆ ನಿರ್ಗಮಿಸುತ್ತಾನೆ; ವಿಷಹಾಕಿದ ಉಡುಗೊರೆಗಳನ್ನು ಹಿಡಿದ ಮಕ್ಕಳೂ, ಶಿಕ್ಷಕನೂ ಹಿಂಬಾಲಿಸುತ್ತಾರೆ.]

ಮೇಳ— ಇನ್ನು ಮಕ್ಕಳ ಬದುಕಿಗುಳಿದಿಲ್ಲ ಭರವಸೆ. ಇಲ್ಲ-
ವೊಂದೂ. ಅವರಾಗಲೇ ನಡೆದಿಹರು ಕೊಲೆಗೆ.
ವಧು, ಪಾಪ! ಆ ವಧು, ಕೊಳುವಳು ಹೊನ್ನಶಾಪವನು
ಕೊಳ್ಳುವಳು ಹೊಳೆವ ಕಿರೀಟವನು.
ತನ್ನ ಹಳದಿಯ ಕುರುಳ ಸುತ್ತ ಕೂರಿಸುವಳಾ
ಸಾವಿನುಡುಗೆಯನವಳು ತನ್ನ ಕೈಯಿಂದಲೇ.
ಹೊನ್ನ ನಿಲುವಂಗಿಯೂ ಜಳವೂ, ಕಂಪೂ, ಚೆಂದಗಾಣ್ಕೆಯೂ
ಅದನವಳು ಉಡುವಂತೆ ಮೃತಿಮಾಲೆ ತೊಡುವಂತೆ ಮೋಡಿಹಾಕುವುವು,

ಇನ್ನವಳ ಮದುವೆ ಕಿಳ್ನೆಲದ ಅಳಿದವರೊಡನೆ.
ಅಂತಹ ಒಂದು ದೋಣಿಗೆ, ಸಾವಿನ ಒಂದು ಅಂತಹ
ವಿಧಿಗೆ, ಬೀಳುವಳವಳು. ಎಂದೆಂದಿಗೂ
ತಪ್ಪಿಸಿಕೊಳ್ಳಳಾ ಶಾಪದಿಂದ.
ಪಾಪಿ! ಮದುವಣಿಗನೆ, ರಾಜರಲಿ ಸರಿಸಂಟೆ ಗಳಿಸುತ್ತ
ಕಾಣೆ ನೀ ನಿನ್ನ ಮಕ್ಕಳಿಗೆ
ವಿನಾಶವನು, ಅಲ್ಲದೆಯೆ ನಿನ್ನ ಮಡದಿಯಾದವಳಿಗೆ
ಘೋರ ಸಾವನು ತರುವುದ.
ಬಡಪ್ರಾಣಿ, ಇನ್ನೆಂಥ ಪತನ ನಿನ್ನದು!
ಮಡದಿಯಿನ್ನೊಬ್ಬಳೊಂದಿಗೆ ಬಾಳುತಿಹ ಜೇಸನ್
ಎರಡುಬಗೆದನು ಮದುವೆಯಾದೊಲವಿಗೆ.
ಅದು ನಿನ್ನ ಕೈಬಿಟ್ಟಿತೆನುವ ನೋಡಿಗೆ ನಿನ್ನ
ಮಕ್ಕಳನೆ ಕೊಲ್ಲಲಿಹ ಚಿಕ್ಕ ಮಕ್ಕಳ ತಾಯಿ,
ನಾನಳುವೆ ನಿನ್ನಳಲಿಗೂ.

[ಮಕ್ಕಳೊಡನೆ ಶಿಕ್ಷಕನ ಪ್ರವೇಶ]

ಶಿಕ್ಷಕ— ಒಡತಿ, ಈ ಮಕ್ಕಳಿಗೆ ಗಡಿಪಾರು ತಪ್ಪಿತು, ಇದ ಕೇಳು
ರಾಜವಧು ತನ್ನ ಕೈಗಳಲಿ ದಯೆಮಾಡಿ ಕೊಂಡಳು
ನಿನ್ನ ಉಡುಗೊರೆಗಳನು. ಆ ಭಾಗದಲ್ಲಿ ಮಕ್ಕಳು ಸುರಕ್ಷಿತರು.
ಆದರೆ, ಇದು ಏನು?
ದೈವಬಲ ನಿನ್ನ ಕಡೆಗಿದ್ದೂ ನೀನು ಕಂಗೆಟ್ಟು ನಿಲ್ಲುವುದು?
ನನ್ನಕಡೆಯಿಂದ ನಿನ್ನ ಕೆನ್ನೆಯ ತಿರುಗಿಸುತ ವಿಮುಖಳಾಗಿಹುದು?
ಪ್ರಿಯವಲ್ಲವೇ ಕೇಳಲೆನ್ನೀ ನುಡಿಗಳು ನಿನಗೆ?

ಮೀಡಿಯ— ಓಹ್ ಕೆಟ್ಟೆ ನಾನು!

ಶಿಕ್ಷಕ— ಸರಿಹೊಂದದಾ ಮಾತು ನಾ ತಂದ ಸುದ್ದಿಗೆ.

ಮೀಡಿಯ— ನಾ ಕೆಟ್ಟೆ, ನಾ ಕೆಟ್ಟೆ!

ಶಿಕ್ಷಕ— ತಿಳಿಯದೆಯೆ ಏನಾದರೂ ನಾನು ಹೇಳುತ್ತಲಿಹೆನೆ ನಿನಗೆ
ಅನರ್ಥವಾವುದನೊ? ನಾ ತಿಳಿದಂತೆ ಶುಭದ ವಾರ್ತೆಯದಲ್ಲವೆ?

ಮೀಡಿಯ— ಹೇಳಿರುವೆ ನೀನು ಹೇಳಿಹುದ; ದೂಷಿಸೆನು ನಾ ನಿನ್ನನು.

ಶಿಕ್ಷಕ— ಅಂತಾದರೀ ಕೆಳಗಣ್ಣು, ಈ ಕಂಬನಿಯ ಸುರಿಸುವುದದೇಕೆ?

ಮೀಡಿಯ— ಈ ಅಳುವು ಕಟ್ಟಾಯ್ತು, ಮುದುಕ. ಎನ್ನೊಂದು ಹುಚ್ಚಿನಲಿ
ನಾನೂ ದೇವತೆಗಳೂ ಹೂಡಿಹೆವಿದೆಲ್ಲವನ್ನು.

ಶಿಕ್ಷಕ— ಧೈರ್ಯಗೆಡದಿರು! ನಿನ್ನನೂ ನಿನ್ನ ಮಕ್ಕಳು ಮನೆಗೆ ಕರೆತರುವರು.

ಮೀಡಿಯ— ಆ, ಅದಾಗುವ ಮುನ್ನ ಇತರರನು ನಾನು ಕರೆತರುವೆ ಮನೆಗೆ.

ಶಿಕ್ಷಕ— ನಿನಗೂ ಮುಂಚೆ ಮಕ್ಕಳಿಂದಗಲಿಸಿದ ಮಂದಿಯಿದ್ದರು.
ತಮ್ಮ ದುರ್ದೈವವನು ಮರ್ತ್ಯರು ವಿರಕ್ತಿಯಲಿ ಸಹಿಸಬೇಕು.

ಮೀಡಿಯ— ನಾ ಮಾಡುವುದು ಅದನೆ, ನೀನಿನ್ನು ಹೋಗು ಮನೆಯೊಳಗೆ. ಮಕ್ಕಳಿಗೆ
ನಿನ್ನ ವಾಡಿಕೆಯ ದಿನದ ಕೆಲಸವ ಮಾಡು.

[ಶಿಕ್ಷಕ ಮನೆಯೊಳಗೆ ಹೋಗುತ್ತಾನೆ. ಮೀಡಿಯ ತನ್ನ ಮಕ್ಕಳ ಕಡೆಗೆ ತಿರುಗುತ್ತಾಳೆ]

ಓ ಮಕ್ಕಳಿರ, ಓ ಎನ್ನ ಮಕ್ಕಳಿರ, ನಿಮಗೊಂದು ಪಟ್ಟಣವಿದೆ,
ನಿಮಗೊಂದು ಮನೆಯಿದೆ, ನೀವೆನ್ನ ಬಿಟ್ಟಿರಬಲ್ಲಿರಿ.
ನಿಮ್ಮ ತಾಯನು ಬಿಟ್ಟು ನೀವಲ್ಲಿ ಬಾಳಬಹುದು ಎಂದೂ.
ನಾನೂ ಗಡಿಪಾರಾಗುತಿಹೆನಿನ್ನೊಂದು ನಾಡಿಗೆ,
ನಿಮ್ಮ ಸುಖವನು ಕಾಣುವ ನಿಮ್ಮಿಂದ ಸಂತಸವ ಪಡೆವ ಮುನ್ನ,
ನಿಮ್ಮ ವಧುಗಳಿಗುಡಿಸಿ ತೊಡಿಸಿ ಒಸಗೆ ಹಾಸುಗೆಗಳನು ಅಣಿಮಾಡಿ
ವಿವಾಹ ವಿಧಿಯಲಿ ದೀವಿಗೆಯನೆತ್ತಿಹಿಡಿಯುವ ಮುನ್ನವೆ,
ಓಹ್, ನಾನೆಂಥ ಪಾಪಿಯಾಗಿಹೆನೆನ್ನ ಮೊಂಡುತನದಿಂದ !
ಮೊದಲ ಉದ್ದೇಶವಾವುದೊ, ಮಕ್ಕಳಿರ, ನಾ ನಿಮ್ಮ ಸಾಕಿದುದಕೆ ?
ನನ್ನೆಲ್ಲ ತೊಳಲಿಗೆ, ನಾನೆನ್ನ ಸವೆಸಿಕೊಂಡುದಕೆ ?
ವ್ಯರ್ಥ ನಿಮ್ಮನು ಹೆರಲು ನನಗಾದ ಸೂಲ್ಮುಲುಕು.
ನಿರ್ಭಾಗ್ಯೆಯಾದೆನಗೆ ಒಂದು ಕಾಲದಲಿತ್ತು, ನಿಜ,
ನಿಮ್ಮಲ್ಲಿ ಹೇರಾಸೆ: ನೀವೆನ್ನ ಮುಪ್ಪನೀಸುವಿರಿ
ನಾನು ಸತ್ತಂದು ನಿಮ್ಮ ಕೈಯಲ್ಲೆ ಸಿಂಗರಿಸುವಿರೆಂದು.
ಇದು ಲೋಕರೂಢಿ. ಅದೀಗ ಮುಗಿದುಹೋಯ್ತು
ಆ ಸುಂದರ ಕಲ್ಪನೆ. ನಿಮ್ಮಗಲಿದೆನಾದರೊಮ್ಮೆ
ನಾ ಬಾಳಲಿಹ ಬದುಕು, ಚಿಂತೆಯದು, ದುಃಖಕರವೆನಗೆ.
ನೀವು ಇನ್ನೆಂದೂ ಕಾಣದಿರುವಿರಿ ನಿಮ್ಮ ತಾಯನು
ನಿಮ್ಮ ಮುದ್ದು ಕಂಗಳಲಿ, ಸಂದು ಬೇರೊಂದು ಬಾಳ ಬಗೆಗೆ.
ಏಕೆ, ಮಕ್ಕಳಿರ, ನೋಡುವಿರಿ ಕಣ್ತೆರೆದು ನನ್ನ ?
ಸುಳಿಸುವಿರದೇಕೆ ಕಿರುನಗೆಯ ಸವಿಯನಾ ಕೊನೆಯ ಕಿರುನಗೆಯ ?
ಓವ್ಹೊ, ನಾನೇನ ಮಾಡಲು ಬಲ್ಲೆ ? ನನ್ನಿಂದ ಜೀವವೇ ಹೋಗಿದೆ.
ಕೆಳೆಯರೆ, ಮಕ್ಕಳ ಕಣ್ಣಲೊಗೆವ ಆ ಹೊಳಪ ಕಂಡಾಗ.
ಆಗದೆನಗದನು ಮಾಡಲು, ಬಿಟ್ಟೆ ನಾನೆನ್ನ ಯೋಜನೆಗಳನು,
ನಾ ಹಿಂದೆ ಹೂಡಿದುವನು, ಒಯ್ವೆ ನೀ ನಾಡಿಂದಲೆನ್ನ
ಮಕ್ಕಳನು. ಅವರಿಗಾಗುವ ನೋವಿನಿಂದೇಕೆ ನಾನವರ
ತಂದೆಗೆ ಹಿಂಸೆಕೊಡಲಿ, ನಾನೋಯಲದರ ಇಮ್ಮಡಿಯನು ?

ಆಗದಾಗದು, ನಾ ಮಾಡೆನದನು. ಬಿಟ್ಟುಬಿಡುವೆನೆನ್ನ ಯೋಜನೆಯನು.
ಆ, ಬುದ್ಧಿ ಕೆಟ್ಟಿತೆ ಎನಗೆ? ಎನ್ನ ಹಗೆಗಳ ನೋಯಿಸದೆ ಬಿಡುವುದನು
ಬಯಸುವೆನೆ, ಅಂತೆನಗೆ ಅವರ ನಗೆಗೀಡಾಗುವುದನು?
ಎದುರಿಸಲೆ ಬೇಕು ನಾನಿದನು. ಓವೊ, ಆದರೂ ಈ ಮೃದುಲ ವಾದಗಳನು
ಎನ್ನ ಬುದ್ಧಿಗೆ ಸೇರಗೊಟ್ಟೆನೆ ನಾನು? ಎಂಥ ದುರ್ಬಲೆ!
ಮನೆಯೊಳಗೆ ಹೋಗಿ, ಮಕ್ಕಳಿರ. ನಾನು ಆಹುತಿಗಳನು ಅರ್ಪಿಸುವ
ವೇಳೆಗಳಲಿ
ಅಲ್ಲಿರಲು ಯಾವನಿಗೆ ಕಟ್ಟಲೆಯು ಅಡ್ಡಿಯಿಹುದೋ
ಅವನು ಗಮನಿಸಲಿ ಅದನು. ಕೆಡಿಸೆ ನಾನೆನ್ನ ಕೈಗೆಲಸವ.
ಓಹ್! ಓಹ್!
ಓ ಎನ್ನ ಹೃದಯವೇ, ಮಾಡದಿರು, ಮಾಡಕೂಡದು ನೀನು ಕೆಲಸವಿದನು!
ಬಡ ಹೃದಯವೇ, ಅವರು ಹೋಗಲಿ ಬಿಡು, ಮಕ್ಕಳ ಮೇಲಿರಲಿ ಕನಿಕರ.
ನಿನ್ನೊಂದಿಗವರು ಅಥೆನ್ಸಿನಲಿ ಇದ್ದರೆನೆ ನಿನಗವರು ಹರುಷವನು ತಹರು.
ಆಗದು! ನರಕದ ಸೇಡ ತೀರಿಸುವ ರೌದ್ರಿಯರಾಣೆಗೂ ಆಗಕೂಡದು –
ಇದೆಂದಿಗೂ ಆಗದಾಗದು, ನಾ ಸಹಿಸುವುದೆ ಎನ್ನ ಮಕ್ಕಳು
ಎನ್ನ ಹಗೆಗಳುದ್ಧಟತನಕೆ ತುತ್ತಾಗುವುದ?
ಸರ್ವಥಾ ನಿಶ್ಚಿತವಿದು. ಪಾರಾಗಳು ವಧು.
ಇಲ್ಲ, ಕಿರೀಟವಿಹುದವಳ ತಲೆಯ ಮೇಲೀಗ; ಅವಳು,
ರಾಜನ ಆ ಕುಮಾರಿ ಉಟ್ಟ ಉಡುಗೆಯಲಿ ಸಾಯುತಿಹಳು;
ಬಲ್ಲೆ ನಾನದನು.
ಆದರೂ—ಅದು ನಾ ತುಳಿವ ಅತ್ಯಪಾಯದ ದಾರಿ, ಅಲ್ಲದೆಯೆ
ಅದಕಿಂತ ದಿಗಿಲಾದ ದಾರಿಗೆ ನಾನು ಅವರ ಕಳಿಸುವೆನು,—
ಮಾತನಾಡುವೆನು ನಾ ಮಕ್ಕಳೊಡನೆ.

[ಮಕ್ಕಳನ್ನು ತನ್ನ ಬಳಿಗೆ ಕರೆಯುತ್ತಾಳೆ]

ಬನ್ನಿ, ಮಕ್ಕಳಿರ, ಕೊಡಿ ಎನಗೆ
ನಿಮ್ಮ ಕೈಗಳನು, ಕೊಡಿ ನಿಮ್ಮ ತಾಯ್ಗೆ ನಿಮ್ಮ ಕೈಗಳನು,
ಮುತ್ತಿಡಲು ಅವಕೆ.
ಓ ಮುದ್ದು ಕೈಗಳು, ಓ ಎಷ್ಟು ಪ್ರಿಯವೆನಗೆ ಈ ತುಟಿಗಳು,
ಉದಾರವೀ ಕಂಗಳು; ಎನ್ನ ಮಕ್ಕಳ ನಿಲವು, ನಡೆ—
ಸುಖವ ಕೋರುವೆ ನಿಮಗೆ, ಆದರೀ ಲೋಕದಲಿ, ಇಲ್ಲಿಲ್ಲ.
ಇಲ್ಲಿನದ ತೆಗೆದುಕೊಂಡನು ನಿಮ್ಮ ತಂದೆ. ಓ ಎಷ್ಟೊಳಿತು
ನಿಮ್ಮನಪ್ಪಿಕೊಳುವುದು!
ಎಷ್ಟು ಕೋಮಲ ಚರ್ಮ, ಎಷ್ಟು ಸವಿ ಮಕ್ಕಳುಸಿರು!

ಹೋಗಿ, ಹೋಗಿ. ಎನ್ನಿಂದಾಗದಿನ್ನು, ಇನ್ನಿಷ್ಟು
ನೋಡುವುದು ನಿಮ್ಮ. ದುಃಖ ಗೆದ್ದಿಹುದೆನ್ನನು.

[ಮಕ್ಕಳು ಮನೆಯೊಳಗೆ ಹೋಗುತ್ತಾರೆ]

ಅರಿತಿಹೆನು ಚೆನ್ನಾಗಿ ಯಾವ ಹಾನಿಯ ಮಾಡಲೆಳಸಿರುವೆನೆಂಬುದನು ;
ಆದರೆನ್ನೆಲ್ಲ ಮರುತಿಳಿವಿಗಿಂತಲು ಪ್ರಬಲ ಕ್ರೋಧವೆನ್ನದು,
ಮರ್ತ್ಯರಿಗೆ ಘೋರತಮ ಹಾನಿಗಳ ತರುವ ಕ್ರೋಧ.

[ಬಲಕ್ಕೆ ಹೋಗಿಬಿಡುತ್ತಾಳೆ, ಅರಮನೆಯ ಕಡೆಗೆ]

ಹಲವು ಸಲ ಹಿಂದೆ
ಹೆಂಗಸೊಬ್ಬಳು ಬೆದಕೆ ಹೆಣಗುವುದಕಿಂತಲೂ
ಸೂಕ್ಷ್ಮತರ ವಾದಗಳನೆದುರಿಸಿಹೆನು,
ಮಹತ್ತರ ಪ್ರಶ್ನೆಗಳನೆಷ್ಟನೋ ಕಂಡಿಹೆನು
ಇಹಳಿಮಗು ದೇವಿಯೊಬ್ಬಳು ನೆರವಿಗೆ,
ಜತೆಗೊಂಡು ಒಯ್ಯಲೆಮ್ಮನು ಅರಿವಿಗೆ.
ನಮ್ಮ ಎಲ್ಲರನ್ನಲ್ಲ,—ಕಾಣುವಿರೀಗಲೂ
ಹೆಂಗಸರ ಗುಂಪಿನಲಿ ಕೆಲವರನು,
ಹೆಣ್ಣು ಜಾತಿಗೆ ವಿದ್ಯೆ ಇಲ್ಲದಿಲ್ಲ.
ಇದನು ಹೇಳುವೆನು : ಯಾರು ಮಕ್ಕಳನೆಂದೂ
ಹಡೆಯದವರೊ, ಯಾರಿಗದರ ಸುಳಿವೇ ಇರದೊ
ಮಕ್ಕಳನು ಹಡೆದವರಿಗಿಂತ ಅವರು
ಸುಖದಲಿ ಮುಂದು
ಪರಿಣಾಮದಲ್ಲಿ ಸತ್ಫಲವೊ ಮಕ್ಕಳು, ಇಲ್ಲ,
ವ್ಯಸನಕಾರಣವೊ ಎನುವುದನು ಅರಿತವರಲ್ಲ
ಮಕ್ಕಳಿಲ್ಲದವರೆಂದೂ, ಅವರಿಗೀ ಅರಿವು
ಇಲ್ಲದುದರಿಂದ ಕಷ್ಟಗಳು ತಪ್ಪುವುವು.
ಮುದ್ದಾದ ಮಕ್ಕಳಿಹ ಮನೆಯವರ ಬದುಕು
ಅವರ ಚಿಂತೆಗಳಿಂದ ಸೊರಗುವುದ ಕಂಡಿಹೆನು.
ಮೊದಲವರು ಯೋಚಿಸಲು ಬೇಕು ಮಕ್ಕಳನೆಂತು ಮೇಲಾಗಿ
ಸಾಕುವುದು,
ಬಿಟ್ಟುಹೋಗುವುದೆಂತು ಬಂದಿಷ್ಟುಜೀವನಾಧಾರವನ್ನವರಿಗೆನುವುದನು.
ಆ ಬಳಿಕ ತಮ್ಮೆಲ್ಲ ಶ್ರಮ ಯಾರಿಗಾಗಿ,—ಮುಂದೆ
ಒಳ್ಳೆಡೆಯ ಹಿಡಿವರಿಗೊ, ಕೆಟ್ಟವರಿಗೊ,—ಎನುವುದಿನ್ನೂ
ಉತ್ತರ ಪಡೆದಿಲ್ಲದೊಂದು ಪ್ರಶ್ನೆ.
ಮತ್ತೊಂದು, ಕಟ್ಟಕಡೆಯದೂ ಮರ್ತ್ಯರಿಗೆ ಸಾಮಾನ್ಯವೂ

ಆದ ತೊಂದರೆಯಿಹುದು ; ನಾನದನು ಹೇಳುವೆನು :
ಅವರ ಜೀವನಕೆ ಸಾಕೆನಿಸುವನಿತನು ನೀವು ಅವರಿಗಿರಿಸಿದಿರಿ,—
ಬೆಳೆದು ಮಕ್ಕಳು ಯೌವನವ ಮುಟ್ಟಿದರು,
ಒಳ್ಳೆಯುವರಾದರೆನ್ನಿ,—ಆದರೂ ದೈವೇಚ್ಛೆ ಅಂತಿದ್ದರೆ,—
ಸಾವು ಕೊಂಡೊಯ್ಯುವುದಾ ನಿಮ್ಮ ಮಕ್ಕಳ ಒಡಲ್ಗಳನು,
ಸಾಗಿಸಿ ಬಿಡುವುದು ಹೇಡೀಸಿಗೆ.
ಅದರಿಂದ ಲಾಭವೆಮಗೇನು ಮಕ್ಕಳಿಗಾಗಿ—
ಬೇರೆಲ್ಲದರ ಮೇಲೆ—
ಎಲ್ಲವನು ಮೀರಿಸಿದ ಅತಿ ಭಯಂಕರ ದುಃಖವಿದ
ಮರ್ತ್ಯರ ಮೇಲೆ ದೇವತೆಗಳಡಕುವುದೆ ?

[ಮೀಡಿಯಳ ಪ್ರವೇಶ, ಪ್ರೇಕ್ಷಕರ ಬಲಗಡೆಯಿಂದ]

ಮೀಡಿಯ— ನೇಹಿಗರೆ, ಹೇಳಬಲ್ಲೆನು ನಿಮಗೆ, ಬಲುದಿನಗಳಿಂದ ಕಾದಿಹೆ ನಾನು
ವಿಶೇಷ ಘಟನೆಯೊಂದಕೆ. ಈ ಸುದ್ದಿ ಬರುವ ಆ ನೆಲೆಗೆ ಅತ್ತ
ದಿಟ್ಟಿಸಿ ನೋಡುತಿಹೆನು. ಜೇಸನ್ನನಾಳೊಬ್ಬನಿತ್ತ
ಬರುತಿಹನೀಗ, ನೋಡಿ. ಅವನ ಕಷ್ಟದ ಉಸಿರು ಕಾಣಿಸುತಿದೆ
ತರುತಿಹನೆಮಗೆ ವಾರ್ತೆಯನು ಅವನು ಕೆಟ್ಟ ವಾರ್ತೆಯನು ಎನುವುದ.

[ದೂತನ ಪ್ರವೇಶ, ಬಲಗಡೆಯಿಂದಲೇ]

ದೂತ— ಮೀಡಿಯ, ಎಷ್ಟು ಘೋರವಾದುದನು ಎಂಥ ಘಾತಕ ಕೃತ್ಯವ-
ನೆಸಗಿರುವೆ ನೀನು ! ಜೀವವುಳಿಸಿಕೊ ಓಡು, ನಿನ್ನ ಕೈಗೆಟುಕುವುದ
ಹಿಡಿದು
ನಿನ್ನನಿಲ್ಲಿಂದ ಸಾಗಿಸಲು—ಹಡಗೊಂದನೊ, ಇಲ್ಲ, ನೆಲದ ಮೇಲಾದಲ್ಲಿ
ರಥವೊಂದನೊ.

ಮೀಡಿಯ— ಈ ಬಗೆ ಪಲಾಯನಕೆ ತಕ್ಕ ಕಾರಣವಾದರೂ ಏನು ?

ದೂತ— ಸತ್ತಿಹಳವಳು ಈಗ ತಾನೆ, ರಾಜನ ಮಗಳು,
ಸತ್ತಿಹನವಳ ತಂದೆ ಕ್ರೀಯಾನನೂ ; ನಿನ್ನ ವಿಷಗಳಿಂದ.

ಮೀಡಿಯ— ಬಲ್ಸೊಗಸು ನುಡಿಗಳನು ಆಡಿರುವೆ ನೀನು. ಈಗ ಈ ಇನ್ನುಮುಂದೆ
ಎಣಿಸುವೆನು ನಿನ್ನನೆನ್ನ ನೇಹಿಗರಲುಪಕಾರಿಗಳಲೊಬ್ಬನೆಂದು.

ದೂತ— ಏನು ! ಬುದ್ಧಿ ಸರಿಯೋ ನಿನಗೆ ? ಹುಚ್ಚಿಯಲ್ಲವೊ ನೀನು,
ಹೆಣ್ಣೆ ? ದೊರೆಮನೆಗೆ ಆಘಾತವಾಗಿಹುದು ನಿನ್ನಿಂದ.
ಹಿಗ್ಗುವೆಯ ನೀನದಕೆ ? ಅಂಜೆಯ ಅಂಥ ಗೈಮೆಗಳಿಗೆ.

ಮೀಡಿಯ— ನೀ ಹೇಳುವುದಕೆ ಉತ್ತರವಾಗಿ ಒಂದಿನಿಸು ನಾ
ಹೇಳಬೇಕಾದುದೂ ಇಹುದು. ಅವಸರ ಬೇಡ, ಕೆಳೆಯ,

ಆದರೆ ನುಡಿ : ಹೇಗೆ ಸತ್ತರವರು ? ಸಂಕಟಪಟ್ಟು ಸತ್ತರೆನ್ನೆ,
ನೀನೆನಗೆರಡುಪಟ್ಟು ಸಂತಸಪಡಿಸಿದವನು.

ದೂತ— ನಿನ್ನಲ್ಲಿ ಹುಟ್ಟಿದಾ ಮಕ್ಕಳಿಬ್ಬರು ತಮ್ಮ ತಂದೆಯೊಂದಿಗೆ ಒಳಗೆ ಬಂದು
ವಧುವಿನಾವಾಸವನು ಸೇರಿದಾಗ
ನಿನಗಾದ ಅನ್ನೆಯಕೆ ವ್ಯಥೆಗೊಂಡ ನಾವು, ನಿನ್ನ ಅಡಿಯಾಳುಗಳು,
ನಲಿದೆವು.
ಮನೆಯಲೆಲ್ಲೆಲ್ಲು ನಾವು ಮಾತಾಡಿಕೊಂಡುದೊಂದೇ ಸಂಗತಿಯನು,
ಎಂತು ನಿನ್ನ ಪತಿಯೂ ನೀನೂ ಹರಿಸಿದಿರಿ ನಿಮ್ಮ ಕಲಹವನೆನುವುದ.
ಕೆಲರು ಮಕ್ಕಳ ಕೈಗೆ ಮುತ್ತಿಟ್ಟರು, ಕೆಲರವರ ಹಳದಿಕುರುಳಿಗೆ,
ನಾನೊ, ಎನಗೆನ್ನ ತುಂಬಿದಾನಂದವೆನಿತೆನೆ, ಮಕ್ಕಳನು
ವನಿತೆಯರ ಕೋಣೆಗಳ ತನಕ ಹಿಂಬಾಲಿಸಿದೆ ನಾನು
ನಮ್ಮೊಡತಿ—ಗೌರವವ ಸಲಿಸುವೆವು ನಿನ್ನ ಬದಲೀಗವಳಿಗೆ—
ನಿನ್ನ ಇಬ್ಬರು ಮಕ್ಕಳಲ್ಲಿಹುದ ಗಮನಿಸದೆ ಅವಳು
ನಟ್ಟದಿಟ್ಟಿಯಲಿ ಜೇಸನನ ತವಕದಲಿ ಈಕ್ಷಿಸುತ್ತಲೆ ಇದ್ದಳು.
ಬಳಿಕಲಾದರೊ ಅವಳು ತನ್ನ ಕಂಗಳನು ಮುಚ್ಚಿಕೊಂಡಳು,
ಬಾಡಿತವಳ ಕೆನ್ನೆ, ಅವನಿಂದ ಬೇರೆಗೆ ಮುಖವ ತಿರುಗಿಸಿದಳು ;
ಮಕ್ಕಳಲ್ಲಿಗೆ ಬಂದುದಷ್ಟು ಹೇಸಿಗೆಯಾಯ್ತು ಅವಳಿಗೆ.
ನಿನ್ನ ಪತಿಯೊ : ಹೆಣ್ಣ ಕೋಪವ ಹರಿಸ ತೊಡಗಿದನು,
ಹೇಳಿದನು, 'ಕರುಣೆಯಿಲ್ಲದೆ ನೋಡ ಸಲ್ಲದು ನೀನು ನಿನ್ನ ಕೆಳೆಯರನು.
ನಿಲಿಸು ಕೋಪವನು, ಮುಖವ ತಿರುಗಿಸಿ ಮತ್ತೆ ಎನ್ನ ಕಡೆಗೆ.
ನಿನ್ನ ಪತಿಗಾರು ನೇಹಿಗರೊ ಅವರೆ ಆಗಲಿ ನಿನಗು ಕೆಳೆಯವರು ;
ಸ್ವೀಕರಿಸು ಉಡುಗೊರೆಗಳಿವನು. ಬೇಡು ನಿನ್ನ ತಂದೆಯಲಿ ಗಡಿಪಾರಿನಿಂದ
ಈ ಮಕ್ಕಳನು ಕ್ಷಮಿಸೆಂದು. ಮಾಡದನು ನನಗಾಗಿ ' ಎಂದು.
ಅವಳು ಉಡುಗೆಯ ಕಂಡು, ತನ್ನ ತಾ ತಡೆಯಲಾರದೆ ಹೋದಳು ;
ಪತಿ ನುಡಿದುದೆಲ್ಲಕೂ ಒಪ್ಪಿದಳು. ಮಕ್ಕಳೂ ಅವನೂ
ಅರಮನೆಯಿಂದ ದೂರ ತೆರಳುವ ಮುನ್ನ,
ಸುಪ್ರಭೆಯ ನಿಲುವಂಗಿಯನು ಎತ್ತಿಕೊಂಡಳು, ತೊಟ್ಟಳು,
ಧರಿಸಿದಳು ಚಿನ್ನದ ಕಿರೀಟವನು ಸುಳಿಗುರುಳ ಸುತ್ತ ;
ನೇರ್ಪಡಿಸಿದಳು ಕುರುಳಮಾಟವನು ಹೊಳೆವ ಕನ್ನಡಿಯೊಂದರಲ್ಲಿ ;
ತನ್ನ ನಿರ್ಜೀವ ಪ್ರತಿಮೆಯನಲ್ಲಿ ಕಂಡಳು, ನಸು ನಕ್ಕಳು.
ಬಳಿಕ ಪೀಠದಿಂದೆದ್ದವಳೆ ತಿರುಗಾಡಿದಳು ಕೋಣೆಯಲಿ
ಮಿನುಗುವಡಿಗಳನಿಡುತ ಅತಿ ಸೂಕ್ಷ್ಮವಾಗಿ, ಮಿದುವಾಗಿ,
ಉಡುಗೊರೆಗೆ ಹಿಗ್ಗಿ ಹಿರಿಹಿರಿ. ಮೇಲಿಂದ ಮೇಲೆ
ನೇರ ನೀಡಿದಳಡಿಯನು, ಉದ್ದಕೂ ಅದನು ನೋಡಿದಳು.

ಆ ಬಳಿಕ ಆದುದೋ ಭೀಕರ ಕಣ್ಣಿಗೆ.
ಮುಖವರ್ಣ ತಿರುಗಿತ್ತು. ತತ್ತರಿಸಿದಳು ಹಿಂದೆ;
ಓಡಿದಳು; ನಡುಗಿತು ಕಾಲು; ಚಪ್ಪಟೆ ಕೆಳಗೆ ಬೀಳದೆಯೆ
ಪೀಠವೊಂದನು ಹೇಗೊ ಮಾಡಿ ತಲುಪಿದಳು.
ಮುದಿಯ ಹೆಣ್ಣಾಳೊಬ್ಬಳು—ಇದು ನನ್ನ ಭಾವನೆ—ಪ್ಯಾನನೋ
ಬೇರಾವ ದೇವತೆಯೊ ಮೆಟ್ಟಿಕೊಂಡಿರಬೇಕು ಎಂದುಕೊಂಡು
ಕೂಗಿದಳು 'ದೇವರೇ ಹರಸೆಮ್ಮ'ನೆಂದು. ಆದರಿದು ಆ ಮುದುಕಿ
ದೊರೆಮಗಳ ತುಟಿಗಳಲಿ ಬಿಳಿಯ ನೊರೆಯುಕ್ಕುವುದ,
ತನ್ನ ಕಣ್ಗೊಂಬೆಗಳನವಳು ಹೊರಳಿಸುವುದ,
ಅವಳ ಮುಖ ಹನಿರಕ್ತವಿಲ್ಲದಂತಿರುವುದ.
ನೋಡುವ ಮೊದಲು ನಡೆದುದು; ನೋಡಿದ ಬಳಿಕ ಅವಳು
'ದೇವರೆ, ಹರಸೆಮ್ಮ' ನೆನ್ನುವುದಕಿಂತ ಬೇರೊಂದ ಕೂಗಹಾಕಿದಳು.
ಒರಲಿಕೆ ಭಾರಿ. ಓಡಿದರು ಹೆಂಗಸರು, ದೊರೆಯ ಬಳಿಗೊಬ್ಬಳು!
ಹೊಸಮದುವೆ ಗಂಡಿನೆಡೆಗಿನ್ನೊಬ್ಬಳು, ತಿಳಿಸಲು ಅವನ
ವಧುವಿಗಾದುದನು. ಮೇಲಿಂದ ಮೇಲೆ ಧಾವಿಸಲವರು
ಅರಮನೆಗೆ ಅರಮನೆಯೆ ಮೊಳಗಿತ್ತು ಆ ದನಿಯಲಿ.
ಓಡು-ಪಂದ್ಯದ ಮಾರ್ಗದಲ್ಲಿ ಓಡುವನೊಬ್ಬ ತಿರುಗನು ಬಳಸಿ
ಗುರಿಯನು ಸಮೀಪಿಸಲು ವೇಳೆಯೆಷ್ಟಾಗುವುದೊ ಅಷ್ಟರೊಳಗೆ
ಆ ಹುಡುಗಿ ಓ ಪಾಪ! ಮುಚ್ಚಿದ್ದ ತನ್ನ ನುಡಿಗೊಡದ ಕಣ್ಣನು ತೆರೆದಳು;
ಬಳಿಕ ದಾರುಣವಾಗಿ ನರಳುತ್ತ ಮರಳಿ ಪ್ರಜ್ಞೆಯ ಪಡೆದಳು.
ಇಬ್ಬಗೆಯ ನೋವು ಏರುತ್ತಿತ್ತು ಅವಳ ಮೇಲೆ.
ತಲೆಯ ಸುತ್ತಲು ಕುಳಿತ ಹೊನ್ನ ಬಾಸಿಗವೊಂದೆಡೆ
ಎಲ್ಲವನು ನುಂಗುವಗ್ನಿಯ ಭಯಂಕರ ಹೊನಲನೆಸೆದಿತ್ತು;
ನಿನ್ನೆ ಮಕ್ಕಳು ಅವಳಿಗಿತ್ತ ಗಾಡಿ ನೆಯ್ಗೆಯ ಉಡುಗೆ ಇನ್ನೊಂದು ಕಡೆ
ಅಸುಖಕೊಡ್ಡಿದ ಅವಳ ಕೋಮಲ ತನುವ ಬಿಗಿಯುತ್ತಲಿತ್ತು.
ನೆಗೆದಳು ಪೀಠದಿಂದ. ಓಡಿದಳು ಬೆಂಕಿಯನೆ ಉಟ್ಟುತೊಟ್ಟು
ಈಗಿತ್ತ ಆಗತ್ತ ಕುರುಳನಲ್ಲಾಡಿಸುತ, ಯತ್ನಿಸುತ
ಮಕುಟವನು ಒಗೆಯಲಾಶೆಗೆ, ತನ್ನ ಹಿಡಿತವ ತಾನು
ಭದ್ರಗೊಳಿಸಿತು ಹೊನ್ನು. ತನ್ನ ಕುರುಳನು ಅಲುಗಿಸಿದ ವೇಳೆಯಲಿ
ಹೆಚ್ಚು ಕ್ರೌರ್ಯದಲಿ, ಇಮ್ಮಡಿಯಾದ ಕ್ರೌರ್ಯದಲಿ ಬೆಂಕಿ ಜ್ವಲಿಸಿತ್ತು.
ನಡೆದಿತ್ತು ಇಂತೆಯೆ, ವಿಧಿಹತಳಾಗಿ ಅವಳು ನೆಲಕೆ ಬೀಳುವನಕ,
ತನ್ನ ಹಡೆದವರಲ್ಲದಾರಿಗೂ ಗುರುತು ಸಿಕ್ಕದಂತಾಗಿ.
ಅವಳ ಕಂಗಳ ನೆಲೆಯೊ, ಅವಳ ಮುಖದಂದವೊ!—
ಕಾಣುವುದು ಕಷ್ಟವಾಯಿತು. ಅವಳ ನೆತ್ತಿಯಿಂದ

ಸ್ರವಿಸಿದುವು ನೆತ್ತರೂ ಬೆಂಕಿಯೂ ಬೆರೆತು.
ದೇವದಾರುವಿನ ತೊಗಟೆಯಿಂದುಗುವ ಹನಿಗಳಂತೆ ಅವಳ ಮೂಳೆಗಳಿಂದ
ಮಾಂಸ ಬಿದ್ದಿತು ವಿಷದ ಗುಪ್ತದಂಶನದಿಂದ ಕಿತ್ತುಬಂದು.
ಭಯಂಕರ ನೋಟವದು. ಹೆಣವ ಮುಟ್ಟದ ಹಾಗೆ ಭೀತಿ
ತಡೆದುದೆಮ್ಮೆಲ್ಲರನು. ಪಾಠಕಲಿತಿದ್ದೆವು ನಡೆದುದನು ಕಂಡು.
ನಿರ್ಭಾಗ್ಯನಾದವಳ ತಂದೆಯಾದರೊ ನಡೆದುದೇನೊಂದನರಿಯದೆಯೆ,
ಮನೆಗೆ ತಟ್ಟನೆ ಬಂದು ಬಿದ್ದನು ಹೆಣದ ಮೇಲೆ,
ಒಡನೆಯೇ ಕೂಗಿಕೊಂಡನು. ತನ್ನ ತೋಳ್ಗಳನವಳ ಸುತ್ತ ಬಳಸಿ
ಮುತ್ತಿಟ್ಟನವಳಿಗೆ; ನುಡಿದನವಳಿಗಿಂತು, "ಓ ಎನ್ನ ಬಡಪಾಯಿ ಮಗುವೆ,
ಇಷ್ಟು ಘೋರದಿಂ ನಿನ್ನ ನೀಪರಿ ಮುರಿದ ದಿವ್ಯಶಕ್ತಿ ಅದಾವುದು ?
ನಿನ್ನ ನೆನ್ನಿಂದ ಕಸಿದು, ಯಾರೆನ್ನ ಕೂರಿಸಿದರಿಲ್ಲಿ ಹಳೆಯ ಕಾಲದ
ಗೋರಿಯಂತಾಗಿಸಿ. ಓ ಸಾಯುವೆ ಬಿಡು ನಾನೂ ನಿನ್ನೊಂದಿಗೆನ್ನ
ಮಗುವೆ!"

ಮುಗಿಸಿ ತನ್ನಳುವು ಗೋಳನ್ನೆಲ್ಲ
ತನ್ನ ಹೆಜ್ಜೆಯ ಮೇಲೆ ನಿಲ್ಲ ಬಯಸಿದ ಕೆಳವ.
ಆದರೋ ಲಾರೆಲ್ ಮರದ ಟೊಂಗೆಗಳಿಗೆ ಐವಿ ಅಂಟಿಕೊಳುವಂತೆ
ಮೆತ್ತಿಕೊಂಡನು ಸೊಗಸಿನುಡುಗೆಗವ ತಾನೇ. ಭೀಕರ ಅವನ ಹೊಯ್ದಾಟ.
ಕೆಳಗೆಳೆಯುತ್ತಿದ್ದಳು ಅವಳು ಅವನ. ಅವನು ಬಲವಾಗೆಳೆಯೆ,
ಅವನ ಮೂಳೆಗಳಿಂದ ಮುದಿಮಾಂಸ ಕಿತ್ತು ಬರುತ್ತಿತ್ತು.
ಕೊನೆಗೂ ಅವನ ಉಸಿರು ಉಡುಗಿತು. ಆ ಅಸುಖಿ ಮಾನವನು
ತೆತ್ತನಸುವನು, ಇನ್ನು ತಲೆಯೆತ್ತಲಾಗದೆಯೆ.
ಒಡನೆ ಮಲಗಿಹರೀಗ ಮಗಳು, ಮುದಿ ತಂದೆ
ಹೆಣಗಳಾಗಿ,—ಕಂಬನಿಯಲವನು ಹಂಬಲಿಸಿದ್ದುದಾಗಿ.
ನಿನ್ನ ಹಿತಗಳ ಕುರಿತು ಏನನೂ ಹೇಳೆ ನಾನು.
ಕಂಡುಕೊಳ್ಳುವೆ ನಿನ್ನ ಶಿಕ್ಷೆಯನು ತಪ್ಪಿಸಿಕೊಳುವ ದಾರಿಯನು.
ನಮ್ಮ ಮಾನವ ಜೀವನ—ನನ್ನೆಣಿಕೆಯಲ್ಲಿ—ಬಂದು ನೆರಳು,
ಹೇಳಲಂಜೆನಿದನು: ಯಾರು ಮಾನವರಲ್ಲಿ ತಿಳಿದವರು ಎನ್ನಿಸಿಹರೊ,
ಯಾರು ಎಲ್ಲಕ್ಕು ಕಾರಣಗಳನು ಬೆದಕುವರೊ,
ತಂದುಕೊಳ್ಳುವರವರೆ ಅತಿ ದುಃಖವನು ತಮ್ಮ ಮೇಲೆ.
ಏಕೆನಲು, ಮರ್ತ್ಯರಲಿ ಸುಖಿಯೊಬ್ಬನೂ ಇಲ್ಲ;
ಸಿರಿ ದುಮುಕಿ ಹರಿದರೊಬ್ಬನ ಮೇಲೆ, ಇರಬಹುದವನು
ತನ್ನ ನೆರೆಯವಗಿಂತ ಭಾಗ್ಯಶಾಲಿ; ಆದರೂ ಸುಖಿಯಲ್ಲದೆ.
ಮೇಳ— ಸಗ್ಗ ಬಿಗಿದಂತೆ ತೋರುತಿಹುದೆಂದು, ಹಲವಾರು
ಕೇಡುಗಳ ಜೇಸನನ ಮೇಲೆ. ಆಗಬೇಕವಗೆ!

ಕ್ರೀಯಾನ ಮಗಳಾದ ದುರ್ದೈವಿ ಹೆಣ್ಣೆ, ಎಷ್ಟು ಕನಿಕರವೆನಗೆ,
ಜೇಸನನು ಮದುವೆನಿಂದುದಕಾಗಿ ದೂರ ಹೇಡೀಸ ಮನೆಗೆ
ನಡೆದಿರುವ ನಿನ್ನನೂ ನಿನ್ನ ದುರ್ವಿಧಿಯನೂ ಕಂಡು!

ಮೀಡಿಯ— ಮಹಿಳೆಯರೆ! ನಿರ್ದಿಷ್ಟವೆನ್ನ ಗೈಯಲಿಹ ಕೆಲಸ: ಆದಷ್ಟು ಬೇಗ
ಎನ್ನ ಮಕ್ಕಳ ಕೊಲುವುದು, ಈ ನಾಡ ಬಿಟ್ಟು ಹೊರಡುವುದು.—
ಇವು ಹೊರತು,
ಕಾಲಹರಣದಿಂದ ಎನ್ನ ಮಕ್ಕಳು ಕರುಣೆಯಲಿ ಕೊರೆಯಾದ
ಬೇರೊಂದು ಕೈಯಿಂದ ಕೊಲೆಯಾಗಗೊಡುವುದಿಲ್ಲ.
ಬಲಪ್ರಯೋಗ ಬಯಸುವುದು ಎಲ್ಲ ಮಾರ್ಗದಲಿ, ಅವರ ಸಾವನೆ.
ಇಂತಾಗಲೇ ಬೇಕಿಹುದು, ಆದರಿಂದ ನಾನವರ ತಾಯಿ, ಕೊಲ್ಲುವೆನು
ಅವರ.
ಓ ಉಕ್ಕ ತೊಡು ನೀನೆ, ಎನ್ನೆದೆಯೆ, ಹಿಂದೆಗೆಯದಿರು
ಭೀಕರಾವಶ್ಯ ದುಷ್ಕರ್ಮವಿದನೆಸಗಲು.
ಓ ಬಾ, ನನ್ನ ಕೈಯೆ, ನಿರ್ಭಾಗ್ಯ ಪಾಪಿ ಕೈಯೆ, ಕೊಳ್ಳು ಖಡ್ಗವನು,
ಕೊಳ್ಳದನು. ಅಡಿಯಿಡು ಮುಂದೆ ಅನಿಷ್ಟದ ಮೊದಲ್ಗೆ,
ಹಂದೆಯಾಗದಿರು. ಚಿಂತಿಸದಿರು ಅವರ ಕುರಿತು ನೀನು,
ಅವರೆನಿತು ಸವಿಯೆಂದು, ಅವರ ನೀನೆಂತು ತಾಯೆಂದು. ಬೇಗ ಮುಗಿವ
ಈ ಒಂದು ದಿನಕೆ ಮರೆತಿರು ನಿನ್ನ ಮಕ್ಕಳನು.
ಆ ಬಳಿಕ ಅಳು; ನೀನವರ ಕೊಲ್ಲುವವಳಾದರೂ,
ತುಂಬ ಪ್ರಿಯರವರು—ಓ, ನಾನಸುಖಿ ಹೆಣ್ಣು!

[ಕೂಗುತ್ತ ಮನೆಯೊಳಗೆ ನುಗ್ಗುತ್ತಾಳೆ]

ಮೇಳ— ಓ ನೆಲನೆ, ದೂರ ನೆಲೆಗಳಲಿ
ಬೆಳಗುವ ಸೂರ್ಯಕಿರಣವೇ, ಕೆಳಗೆ ನೋಡಿ, ಕನಿಕರಿಸಿ
ಈ ಬಡವೆ ಪತಿತ ಹೆಣ್ಣಿನ ಮೇಲೆ; ನೋಡಿ, ಕೊಲೆಗೈಯ-
ನೆತ್ತುವ ಮುನ್ನ ಅವಳು ತನ್ನೊಡಲ ಕುಡಿಗಳ ಮೇಲೆ.
ನಿಮ್ಮದಾಗಿತ್ತು ಅವಳೆದ್ದು ಬಂದ
ಹೊನ್ನ ಹುಟ್ಟು. ಅಂಜುವೆನೀಗ ನಾನು
ದಿವ್ಯ ರಕ್ತವ ನರರು ಚೆಲ್ಲಿಯಾರೆಂದು.
ಓ, ಬಾನ ಬೆಳಕೆ, ಹಿಡಿ ಹಿಂದಕವಳ ಕೈಯನು,
ತಡೆ ಅವಳನು, ಅಟ್ಟು ಮನೆಯಿಂದಾಚೆ
ನರಕದ ಪಿಶಾಚಗಳು ಎಬ್ಬಿಸಿದ ರಕ್ತ ರೌದ್ರಿಯನು.
ಮಕ್ಕಳನು ನೀನು ಪೊರೆದುದು ವ್ಯರ್ಥ, ಹಾಳು;
ಸಿಂಪ್ಲಿಗೆಡೀಸ ಕರಿ ನೀಲಿ ಬಂಡೆಗಳ ನಡುವೆ,
ಒಳಗೆ ಕರೆಯದ ಕಡಲಿನಿಕ್ಕಟ್ಟ ದಾಟಿದ ಮೇಲೆ

ನಿಷ್ಫಲವಾಯ್ತೊ, ನೀನು ಹೆತ್ತುದಾ ಮುದ್ದು ಮರಿಗಳನು !
ಓ ಕೆಟ್ಟ ಬದುಕೆ, ಇದು ಬಂದುದೆಂತು
ನಿನ್ನೆದೆಗೆ, ಈ ಕೋಪಭಾರ,
ರಕ್ತವನು ಚೆಲ್ಲುವೀ ಕ್ರೂರಬುದ್ಧಿ !
ಮರ್ತ್ಯರಾದವರ ಮನೆಗಳ ಮೇಲೆ ಎರಗುವೀ ಬಗೆಯನಾಹುತಗಳಲ್ಲಿ
ದೇವರವರಿಂದ ಕೇಳುವನು ನಿಷ್ಠುರವಾದ
ದಂಡವನೆ, ಬಂಧುರಕ್ತದ ಕಲೆಗೆ.

[ಮಕ್ಕಳಲ್ಲಿ ಒಂದರ ಕಿರಿಚು ಕೇಳಿಬರುತ್ತದೆ.]

ಮೇಳ— ಅಳು ನಿನ್ನ ಕಿವಿಗೆ ಬಿತ್ತೆ ? ಮಕ್ಕಳಳು ಕಿವಿಗೆ ಬಿತ್ತೆ ?
ಓ ಕಲ್ಲೆದೆಯ ನೀನೆ, ಓ ದುಷ್ಕೃತಿಗೆಂದೆ ಮಾಡಿಸಿದ ಹೆಣ್ಣೆ !

ಮಕ್ಕಳಲ್ಲಿ ಒಂದು [ಒಳಗಿಂದ]

ಮಾಡಲೇನನು ಬಲ್ಲೆ ನಾನು ಪಾರಾಗಲೆನ್ನ ತಾಯ್-ಕೈಗಳಿಂದ ?

ಇನ್ನೊಂದು ಮಗು [ಒಳಗಿಂದ]

ಓ ಎನ್ನಣುಗ ತಮ್ಮ, ನಾ ಹೇಳಲಾರೆ. ಕೆಟ್ಟೆವು ನಾವು

ಮೇಳ— ನಾ ಮನೆಯ ಹೊಗಲೆ ? ಓ ಖಂಡಿತ ಹೊಗಲೆಬೇಕು,
ಕೊಲೆಯಿಂದ ಮಕ್ಕಳನು ಕಾಪಾಡಲು.

ಒಂದು ಮಗು [ಒಳಗಿಂದ]

ಓ ನಮಗೆ ನೆರವಾಗಿ, ದೇವರ ಹೆಸರಿನಲ್ಲಿ, ಈಗ ನಿಮ್ಮ ನೆರವು ಬೇಕೆಮಗೆ.
ಈಗ, ಈಗದಕೆ ಹತ್ತಿರವೆ ಆಗಿಹೆವು. ನಮಗಿಹುದು ಖಡ್ಗ-ಬಂಧ.

ಮೇಳ— ನಿನ್ನ ಹೃದಯವಾಗಿರಲುಬೇಕು ಓ ಶಿಲೆಯಿಂದ, ಇಲ್ಲವೇ, ಉಕ್ಕಿನಿಂದ.
ಕೊಲ್ಲಬಲ್ಲವಳು ನೀನು
ನಿನ್ನ ಬಸಿರಿನ ಫಲವ ನಿನ್ನ ಕೈಯಾರೆ.
ಒಬ್ಬಳದೆ ಹೆಸರ ಕೇಳಿಹುದು ನಾನು, ಹಿಂದಿದ್ದ ಹೆಣ್ಣುಗಳಲಿ
ಐನೊ ಒಬ್ಬಳೆ ಅಂತೆ ತನ್ನ ಮಕ್ಕಳಮೇಲೆ ಕೈಮಾಡಿದವಳು,
ಜ್ಯೂಸನ ಮಡದಿ ತನ್ನ ಮನೆಯಿಂದವಳನಟ್ಟಿ ಅಲೆಸಿದಾಗ
ಸ್ವರ್ಗ ಅವಳಿಗೆ ಹುಚ್ಚು ಹಿಡಿಸಿ ಓಡಿಸಿದಾಗ.
ತನ್ನ ಮಕ್ಕಳ ದುಷ್ಟ ರಕ್ತಪಾತಕ್ಕೆ ಹೇಸಿ
ಬಡಪಾಯಿ ತಾನೆಸೆದುಕೊಂಡಳು ತನ್ನನೇ
ಕಡಲಿಗೆ, ಕಡಲ ಬಂಡೆಯ ನೆತ್ತಿಯಿಂದ ಹಾರಿ,
ತನ್ನೆರಡು ಮಕ್ಕಳೊಂದಿಗೇ ಸಾಯಲು.
ಇದಕಿಂತ ಘೋರವಿರಬಲ್ಲುದೇನು ? ಓ ಹೆಣ್ಣಳೊಲವೆ,
ಕಷ್ಟಮಯ ನೀನು,

ಇನ್ನೆಷ್ಟನರ್ಥಗಳನುಂಟುಮಾಡಿರುವೆ ಈಗಾಗಲೇ ನೀನು !

[ಜೇಸನ್ನನ ಪ್ರವೇಶ ಭೃತ್ಯರೊಂದಿಗೆ]

ಜೇಸನ್— ಈ ನಿವಾಸದ ಮುಂದೆ ಹತ್ತೆ ನಿಂತಿರುವ ಹೆಂಗಸರೆ, ನಿಮ್ಮ ಕೇಳುವೆ,
ಈ ಘೋರಕೃತ್ಯವನು ಎಸಗಿರುವ ಮೀಡಿಯ ಮನೆಯಲಿನ್ನೂ ಇಹಳೊ,
ಇಲ್ಲವೇ ಓಡಿಹೋಗಿಹಳೊ ?
ರಾಜಪ್ರತೀಕಾರದಿಂದ ತಪ್ಪಿಸಿಕೊಳಲು ಬಯಸಿರುವಳಾದರವಳು
ಅವಿತುಕೊಳಬೇಕಿನ್ನು ಅವಳು ಭೂಮಿಯ ಕೆಳಗೆ,
ಏರಬೇಕಾದೀತು ಗಾಳಿಯೆತ್ತರಕವಳು ರೆಕ್ಕೆಗಳ ಕಟ್ಟಿಕೊಂಡು !
ಭ್ರಮೆಯೆ ಅವಳಿಗೆ ಎಮ್ಮ ಅರಸರನು ಕೊಂದು
ನಿರಪಾಯಳಾಗಿ ಈ ಮನೆಯಿಂದ ತಾನು ಪಾರಾಗುವಳು ಎಂದು ?
ಅವಳ ವಿಷಯಕ್ಕಿಂತ ಮಿಗಿಲಾಗಿ ನನಗೀಗ ಚಿಂತೆ
ಮಕ್ಕಳದು—ತನ್ನ ದುಷ್ಕೃತಿಗವಳು ದುಃಖಪಡುವಂತೆ ಮಾಡುವರು
ದೊರೆಯ ಕೆಳೆಯರು. ನಾ ಬಂದೆ ನನ್ನ ಮಗಂದಿರನುಳಿಸಲು
ತಾಯ ದುಷ್ಕೃತಿಗೆ ಸೇಡುತೀರಿಸಿಕೊಳುವ ಸಮಯದಲಿ
ದೊರೆಯ ಮನೆಯವರೊಮ್ಮೆ ಇವರಿಗೂ ಕೇಡ ತಂದಾರು, ಎಂದು.

ಮೇಳ— ಓ ಜೇಸನ್, ಎನಿತಾಳದಳಲಿನಲಿ ನೀನು ಸಿಕ್ಕಿಹೆ ಎನುವುದು
ತಿಳಿದಿತ್ತೆ, ನೀ ನುಡಿಯೆ ಈ ತೆರದಲಿ.

ಜೇಸನ್— ಏನದು ? ಯೋಚಿಸಿಹಳೇನವಳು ಕೊಲ್ಲಲೆನ್ನನೂ ?

ಮೇಳ— ಸತ್ತಿಹರು ನಿನ್ನ ಮಕ್ಕಳು, ಅವರ ತಾಯಿಯಾದವಳ ಕೈಯಿಂದಲೇ.

ಜೇಸನ್— ಏನು ? ಇದು ದಿಟವೆ ? ಓ ಹೆಣ್ಣೆ, ನೀನೆನ್ನ ನಾಶಗೈದೆ.

ಮೇಳ— ನೀ ನಿನ್ನ ದೃಢಪಡಿಸಿಕೊ, ಇನ್ನಿಲ್ಲ ನಿನ್ನ ಮಕ್ಕಳು.

ಜೇಸನ್— ಅವಳು ಅವರನು ಕೊಂದುದೆಲ್ಲಿ ? ಈ ಬಳಿಯೊ, ಇಲ್ಲ, ಮನೆಯೊಳಗೊ ?

ಮೇಳ— ತೆರೆ ನೀನು ಹೆಬ್ಬಾಗಿಲ, ನೀನು ಕಾಣುವೆ ಅಲ್ಲಿ ಹತರಾದ ಅವರ.

ಜೇಸನ್— ಆದಷ್ಟು ಬೇಗ, ಆಳುಗಳೆ, ತೆರೆಯಿರಾ ಬಾಗಿಲುಗಳ, ಮುರಿಯಿರಿ
ಅಗುಳಿಗಳ, ನೋಡುವೆನು ಇತ್ತಲೆಯನಿಷ್ಟವಿದನು,
ಸತ್ತೆನ್ನ ಮಕ್ಕಳನು, ಈ ಇವಳನೂ—ಓ ತೀರಿಸುವೆನವಳ ಋಣವ.

[ಅವನ ಭೃತ್ಯರು ಬಾಗಿಲೆಡೆಗೆ ನುಗ್ಗುತ್ತಾರೆ: ಮೀಡಿಯ ಡ್ರೇಗನ್‌ಗಳನ್ನು (ರೆಕ್ಕೆಗಳೂ ಉಗುರುಗಳೂ ಉಳ್ಳ ಮಹಾ ಸರ್ಪಗಳನ್ನು) ಕಟ್ಟಿದ ರಥವೊಂದರಲ್ಲಿ ಕುಳಿತು ಮನೆಯ ಮೇಲೆ ಕಾಣಿಸಿಕೊಳ್ಳುತ್ತಾಳೆ. ಅವಳೊಡನೆ ಅವಳ ಮಕ್ಕಳ ಮೃತ ದೇಹಗಳಿವೆ.]

ಮೀಡಿಯ— ನೀನೀ ಮಹಾದ್ವಾರಗಳನೇಕೆ ಒಡೆಯುವುದು, ಅಗುಳಿಗಳ ಮುರಿಯೆ ಯತ್ನಿಸುವುದು,
ಹೆಣಗಳಿವುಗಳ ಜತೆಗೆ ಎನ್ನನೂ ಹಿಡಿಯಬೇಕೆಂದು ಅಲ್ಲವೆ ?
ನಿನ್ನ ಶ್ರಮ ನಿಲ್ಲಬಹುದಿನ್ನು; ಎನ್ನಿಂದ ನಿನಗಾಗಬೇಕಾದುದನು ನುಡಿ,

ಇಷ್ಟವಾದರೆ. ನಿನ್ನ ಕೈಯಿಂದೆನ್ನನೆಂದಿಗೂ ನೀ ಮುಟ್ಟಲಾರೆ,—
ಅಂಥ ರಥವಿದನೆನ್ನಯ ತಂದೆಯ ತಂದೆ ಹೀಲಿಯೋಸ್ ಎನಗೆ
ಎನ್ನ ಶತ್ರುಗಳಿಂದ ಎನ್ನ ರಕ್ಷಿಸಿಕೊಳಲು ಕೊಟ್ಟಿರುವುದು.

ಜೇಸನ್— ಎನಗೆ, ದೇವತೆಗಳಿಗೆ, ಸಮಸ್ತ ಮಾನವಕುಲಕೆ, ಪರಮ-
ಅಸಹ್ಯಳೆನಿಸಿರುವ ನೀನು, ದ್ವೇಷವುಕ್ಕಿಸುವ ನೀನು,
ನಿನ್ನ ಮಕ್ಕಳ ಮೇಲೆ ಖಡ್ಗವೆತ್ತಲು ಮನಸುಮಾಡಿದ
ಅವರ ತಾಯಾದ ನೀನು, ಎನಗೆ ನೀ ಮಕ್ಕಳನ್ನುಳಿಸದಾದೆ.
ನೀನದನು ಮಾಡಿರುವೆ; ನಿನಗೀಗಲೂ ನೋಡಲಹುದೆ
ಸೂರ್ಯನನು, ಭೂಮಿಯನು ಈ ಘೋರಗಳ ಬಳಿಕ?
ಸಾಯಬಾರದೆ ನೀನು. ಈಗೆನಗೆ ಸ್ಪಷ್ಟವದು—ಆಗ ಹೊಳೆದಿರಲಿಲ್ಲ,
ಪರನಾಡ ಮನೆಯಿಂದ ನಿನ್ನ ಕದಲಿಸಿ ನಿನ್ನ ನಾನು
ದುಷ್ಟ ಜಂತುವನು, ತವರುನಾಡಿಗೆ, ತಂದೆಗೆ ದ್ರೋಹಿಯಾದಳನು
ಗ್ರೀಕರ ಒಂದು ಮನೆಗೆ ತಂದುಕೊಂಡಾಗ.
ದೇವತೆಗಳೆನ್ನ ಮೇಲೆಸೆದರಂದು ನಿನ್ನವರ ಸೇಡ ಶಾಪಗಳನು.
ಏಕೆನಲು, ನಿನ್ನ ಸೋದರನನು ಕೊಂದೆ ನೀ ನಿನ್ನ ಮನೆಯೊಳಗೇ.
ಬಳಿಕ ಚೆಲುವಿನ ಹಡಗಹತ್ತಿ ಬಂದೆ ನೀನು, ಆರ್ಗೊವನು.
ಅದು ನಿನ್ನ ಮೊದಲು, ನಿನಗೆನ್ನೊಡನೆ ಮದುವೆಯಾಗಿ,
ನಾ ಗಂಡನಾಗಿ, ನನಗೆ ನೀ ಮಕ್ಕಳನು ಹೆತ್ತಮೇಲೆ,
ಹಾಸುಗೆಯ ಸುಖಕಾಗಿ ನೀನವರ ಕೊಂದೆ.
ಟಸ್ಕನ್ ಕಡಲ ಸ್ಕಿಲ್ಲಕ್ಕಿಂತ ಕಾಡುಗುಣದವಳನು
ಹೆಣ್ಣಲ್ಲ ರಕ್ಕಸಿಯನು, ಕಡುನಾಶ ತರುವ ನಿನ್ನನು
ಕೈಹಿಡಿಯಲೆಂದು ನಾ ಹಿಂದೆ ಒಪ್ಪದೆ ಬಿಟ್ಟ ಗ್ರೀಕರ
ಯಾವ ಹೆಣ್ಣಿಗೂ ಧೈರ್ಯಬಾರದಿಂಥ ದುಷ್ಕೃತ್ಯಗಳನೆಸಗಲು.
ಆಹ, ಇಲ್ಲ. ಹೀನನುಡಿ ಎನ್ನ ಬಳಿ ಹತ್ತುಸಾವಿರಿರೆಯೂ
ಚುಚ್ಚಲರಿಯೆನು. ನಿನಗಷ್ಟು ಸಹಜ ಭಂಡತನ,
ತೊಲಗು, ದುಷ್ಕರ್ಮಿ, ನಿನ್ನ ಮಕ್ಕಳ ನೆತ್ತರ ಕಲಂಕದೊಡನೆ.
ಇನ್ನು ಎನ್ನವಿಧಿಗೆ ಕೊರಲೆತ್ತಿ ರೋದಿಸುವುದುಳಿದಿದೆ:
ಹೊಸ ಮದುವೆ ಹೆಣ್ಣಿಂದಲೂ, ಎನಗಿಲ್ಲವಾವ ಒಲವೂ,
ನಾ ಹಡೆದು ನಾ ಬೆಳಸಿದಾ ಹುಡುಗರಿಂದಲೂ.
ಜೀವದೊಂದಿಗೆ ಅವರಲಿನ್ನೆಂದಿಗೂ
ಮಾತಿಲ್ಲವೆನಗೆ. ಮುಗಿದುದೋ ಎನ್ನಬಾಳು!

ಮೀಡಿಯ— ನಾ ನಿನಗೆ ನಡೆದುಕೊಂಡುದು ಎಂತು, ನೀನೆನಗೆ ಮಾಡಿದುದು ಏನು—
ಇವೆರಡನೂ ತಿಳಿಯದವನಾಗಿದ್ದರಾ ತಂದೆ ಜ್ಯೂಸ್
ನಿನ್ನ ಮಾತಿಗೆ ನಾನು ಕೊಡಲುಬಹುದಿದ್ದ ಉತ್ತರ ದೀರ್ಘವಿರುತಿತ್ತು.

ಆಗದು : ನೀನು ಎನ್ನ ಪ್ರೇಮವ ತಿರಸ್ಕರಿಸಿ,
ಎನ್ನನಪಹಾಸ್ಯಗೈದು ಹಿತವಾಗಿ ಬದುಕನುದ್ದಕೂ ಬಾಳುವುದು
ದೊರೆಯ ಮಗಳೋ ನಿನಗೆ ಮಗಳ ಕೊಟ್ಟ ಕ್ರೇಯಸನೋ
ದಂಡವನು ತೆರದೆ ಎನ್ನನು ಓಡಿಸುವುದಾಗದು ; ಇವು
ಆಗಕೂಡದು ಎಂದು ಆಗಿತ್ತು. ಈಗ
ಕೂಗಿಕೋ ಎನ್ನ ರಕ್ಕಸಿಯೆಂದು, ನಿನ್ನಿಷ್ಟ.
ಟಸ್ಕನ್ ಕಡಲ ಗುಹೆಗಳಲಿ ನೆಲಸಿರುವ ಸ್ಕಿಲ್ಲ,
ನಿನ್ನ ಹೃದಯವನು ಕೊಂಡಿಹೆನು, ವಿಧಿಯಿರದೆ, ನಾನೂ.

ಜೇಸನ್— ನೋವ ಪಡುತಿರುವೆ ನೀನೂ ; ಪಾಲ್ಗೊಳುವೆ ನನ್ನ ಶೋಕದಲಿ.

ಮೀಡಿಯ— ಅಹುದು, ಎನ್ನಳಲು ಲಾಭ, ನೀನದ ಅಣಕಿಸಲಶರದಾದಾಗ.

ಜೇಸನ್— ಓ ಮಕ್ಕಳಿರ, ಎಂಥ ಕೆಟ್ಟತಾಯ್ ನಿಮಗೆ ಆಗಿದ್ದಳವಳು !

ಮೀಡಿಯ— ಸತ್ತರವರೊಂದು ರೋಗದಿಂದ, ತಗುಲಿತದು ಅವರಿಗೆ ಅವರ ತಂದೆಯಿಂದ.

ಜೇಸನ್— ನುಡಿವೆ ನಾ ನಿನಗೆ : ನನ್ನ ಕೈಯಲ್ಲ ಅವರನು ಸಾಕಗೊಳಿಸಿದುದು.

ಮೀಡಿಯ— ಅಲ್ಲ,—ನಿನ್ನ ಸೊಕ್ಕು ; ಹೊಚ್ಚ ಹೊಸದಿಯ ನೀನು ಮದುವೆಯಾದದ್ದು.

ಜೇಸನ್— ಅದಕ್ಕಾಗಿಯೇ ನೀನು ಕೊಲಲವರ ಇಚ್ಛಿಸಿದೆ.

ಮೀಡಿಯ— ಪ್ರೇಮವಂತಹ ಸಣ್ಣ ನೋವೆಂದೆ ನಿನ್ನರಿವು—ಹೆಂಗಸಿಗೆ ?

ಜೇಸನ್— ವಿವೇಕಿಯಾದಳಿಗೆ—ನಿಶ್ಚಯ ; ನೀನಾದರೋ ಪರಮ ಕೆಡುಕಿ !

ಮೀಡಿಯ— ಸತ್ತಿಹರು ಮಕ್ಕಳು. ದುಃಖಪಡಿಸಲು ನಿನ್ನ ನಾನಿದನು ಹೇಳುವುದು.

ಜೇಸನ್— ಮಕ್ಕಳೆನ್ನೆ ಣಿಕೆಯಲಿ ಸುರಿಯುವುವು ಶಾಪಗಳ ನಿನ್ನ ಮೇಲೆ.

ಮೀಡಿಯ— ದೇವತೆಗಳರಿತಿಹರು ಈ ಅಳಲ ಕರ್ತೃ ಯಾರು ಎನ್ನುವುದ.

ಜೇಸನ್— ಅಹುದು, ಖಂಡಿತವಾಗಿ ದೇವತೆಗಳರಿತಿಹರು, ಅರಿತಿಹರು ಎಂಥ
ಹೇಸಿಕೆಯ ಎದೆ ನಿನ್ನದೆಂದು.

ಮೀಡಿಯ— ದ್ವೇಷಿಸೆನ್ನನು. ನೀನು ಬಗುಳುತಿಹ ಕಹಿಯಿಂದ ಆಯಾಸವೆನಗೆ.

ಜೇಸನ್— ನನಗೆ ನಿನ್ನದರಿಂದ. ಇದಕಿಂತ ಸುಲಭ ನಿನ್ನನು ಬಿಡುವುದು.

ಮೀಡಿಯ— ಅಂತಾದರೇನ ಮಾಡಲಿ ನಾನು ?—ನಾನು ನಿನ್ನ ಬಿಡಲು
ಹಂಬಲಿಸುತಿಹೆನು.

ಜೇಸನ್— ದೇಹಗಳ ಕೊಡು ಎನಗೆ ಹೂಳಲಿಕೆ, ಅಳಲೂ ಅವರಿಗೆಂದು.

ಮೀಡಿಯ— ಊಹು, ಮಾಡೆನದನು. ನಾನೇ ಹೂಳುವೆನು, ಅವರ ಹೊತ್ತು
ಭೂಶಿರದ ಮೇಲಿರುವ ಹೀರಾಳ ಗುಡಿಗೆ, ಹಗೆ—
ಯಾರೂ ಅವರ ಗೋರಿಯನು ಕಿತ್ತು, ಅಪಚಾರ-
ವೆಸಗದಂತೆ. ಈ ಕಾರಿಂಥ ನಾಡಿನಲಿ ಸ್ಥಾಪಿಸುವೆ
ವರ್ಷವರ್ಷವೂ ಬಲಿಯೀವ ಪುಣ್ಯದುತ್ಸವವೊಂದನು,
ರಕ್ತಪಾಪಕೆ ನಿತ್ಯಪ್ರಾಯಶ್ಚಿತ್ತವಾಗಿ.
ನಾನು ನನ್ನಷ್ಟಕ್ಕೆ ಹೋಗುವೆನು ಎರೆಕ್ಥಿಯೂಸ ನಾಡಿಗೆ

ಪ್ಯಾನ್ಡಿಯನ್ನಿನ ಪುತ್ರ, ಐಜಿಯುಸ್ಸಿನ ಮನೆಯುಲಿರಲು.
ನೀನೊ ನಿನಗೆ ಸಲುವಂತೆ ನಿರ್ವಿಶೇಷನಾಗಿ ಸಾಯುವೆ,
ನೆತ್ತಿಗೆ ಬಡಿದು ಆರ್ಗೊವಿನ ಒಂದು ತೊಲೆ-ಸೀಳು ;
ಅಷ್ಟರಲೆ ಕಂಡಿರುವೆ ನೀನೆನ್ನ ಒಲವ ಕಹಿ ತುದಿಯನು.

ಜೇಸನ್— ಮಕ್ಕಳಿಗಾಗಿ, ಧರ್ಮಕ್ಕಾಗಿ ನಾಶಗೊಳಿಸಲಿ ನಿನ್ನ
ರೌದ್ರಿಯೊಬ್ಬಳು—ನೆತ್ತರಿಸ ಮುಯ್ಯ ತೀರಿಸುವವಳು.

ಮೀಡಿಯ— ಕಿವಿಗೊಡುವುದಾವ ದೇವತೆ
ವಂಚಕಗೆ, ವಚನ ಭ್ರಷ್ಟನಿಗೆ ?

ಜೇಸನ್— ಓ ನಿನ್ನ ದ್ವೇಷಿಸುವೆ ನಾನು—ಬಾಲವಧೆ ಗೈದವಳನು.

ಮೀಡಿಯ— ಹೋಗು ನಿನ್ನರಮನೆಗೆ, ನಿನ್ನ ವಧುವನು ಹೂಳು.

ಜೇಸನ್— ಹೋಗುವೆನು,—ಮಕ್ಕಳಿಬ್ಬರಿಗಾಗಿ ರೋದಿಸಲು.

ಮೀಡಿಯ— ಶಟ್ಟಿಲ್ಲ ನಿನಗದಿನ್ನೂ, ಮುಂದಾಗುವುದಕೆ ಕಾಯಿ.

ಜೇಸನ್— ಓ ನಾನು ಪ್ರೀತಿಸಿದೆ ಮಕ್ಕಳನು.

ಮೀಡಿಯ— ನಾನವರ ಪ್ರೀತಿಸಿದೆ, ನೀನು ಪ್ರೀತಿಸಲಿಲ್ಲ.

ಜೇಸನ್— ನೀನವರ ಪ್ರೀತಿಸಿದೆ, ಕೊಂದೆ ಅವರ.

ಮೀಡಿಯ— ನಿನ್ನ ನೋಯಿಸಲೆಂದು.

ಜೇಸನ್— ಓ ನಿರ್ಭಾಗ್ಯನಾದೆನಗೆ ಎಷ್ಟು ಹಂಬಲವೊ
ಎನ್ನ ಮಕ್ಕಳ ಮುದ್ದು ತುಟಿಗಳಿಗೆ ಮುತ್ತನಿಡಲು !

ಮೀಡಿಯ— ಈಗ ನೀನವರೊಡನೆ ಮಾತಾಡಲೆಳಸುವೆ, ಈಗ ನೀನವರ ಮುತ್ತಿಡಲು
ಬಯಸುವೆ ;
ಬೇಡವಾದರು ಆಗ ನಿನಗವರು.

ಜೇಸನ್— ಬೇಡುವೆನು ನಾ ನಿನ್ನ, ಮುಟ್ಟಗೊಡು ಎನ್ನ
ಸುಕುಮಾರರೊಡಲುಗಳನು.

ಮೀಡಿಯ— ಕೊಡೆನು. ನಿಷ್ಫಲ ನಿನ್ನ ಸುಡಿಗಳೆಲ್ಲ.

ಜೇಸನ್— ಓ ದೇವರೆ, ಕೇಳುತಿರುವೆಯ ಇದನು, ಈ ಚಿತ್ರಹಿಂಸೆಯನು,
ಕುತ್ಸಿತಳಾದ ಈ ಹೆಣ್ಣು, ರಾಕ್ಷಸಿ, ಶಿಶುಘ್ನಳಿಂ-
ದೆನಗಾದ ಸಂಕಟಗಳಿವನು.
ಆದರೂ ಎನ್ನ ಕೈಲಾದುದನು ಮಾಡುವೆನು.
ಗೋಳಿಡುವೆ, ಕೂಗಿಡುವೆ ಬಾನ್ಗೆ, ದೇವತೆಗಳ
ಸಾಕ್ಷಿ ಕರೆವೆನು ಇದಕೆ ;
ನೀನೆನ್ನ ಹುಡುಗರನು ಕೊಂದ ಪರಿಗೆ,
ನಾನವರ ಮೈಗಳನು ಮುಟ್ಟದಂತೆ ಅವರ ಮಣ್‌ಮಾಡದಂತೆ
ನೀ ಮಾಡಿಹುದಕೆ.

ನಿನ್ನ ಕೈಯಿಂದವರ ಮುಂದೆ ಕೊಲ್ಲಿಸಲು
ನಾನವರಿಗೆ ಹುಟ್ಟನೀಯದಿದ್ದರಾಗಿತ್ತು !

ಮೇಳ— ಒಲಿಂಪಸನಲಿ ಸ್ಯೂಸಿಹನು ಮೇಲೆ-ನೋಡಲಿಕಾಗಿ
ಹಲವಾರು ಗೆಯ್ಮೆಗಳನು. ದಿವಿಜರು ಸಾಧಿಸುವರು
ನಮಗೆ ಅರಿವಾಗದೆನಿತನೊ. ಊರ್ಜಿತವಾಗದು
ನಾವು ಬಗೆದುದು. ನಾವು ಬಗೆಯದಿದ್ದುದನು
ದೇವರಾಗಿಸುವನು. ಅಂತೆಯೇ ನಡೆದಿಹುದು ಈ ಕಥೆಯಲಿ.

# ಟಿಪ್ಪಣಿ

## ೬

ಸಿಂಪ್ಲೆಗೆಡೀಸ್—ಒಂದಕ್ಕೊಂದು ಬಡಿಯುವ ಜೋಡಿ ಬಂಡೆಗಳು, ಅವು ನಿರಂತರವಾಗಿ ಒಂದರ ಮೇಲೊಂದು ಉರುಳುತ್ತಿದ್ದವು. ಆಗ ಸುತ್ತಲೂ ಕಡಲು ಕುದಿದೇಳುತ್ತಿತ್ತು. ಕಪ್ಪು ಸಮುದ್ರದ ಹೆಬ್ಬಾಗಿಲಾದ ಬಾಸ್ಪೊರಸ್ಸಿನ ಮುಖದ ಬಳಿಯಲ್ಲಿದ್ದವು.

ಆರ್ಗೊ—ಜೇಸನ್ನನೂ ಅವನ ಧೀರ ಯೋಧರೂ ಹೊನ್ನತುಪ್ಪಟವನ್ನು ತರಲು ಹೊರಟಾಗ ಬಳಸಿದ ನೌಕೆ.

ಕಾಲ್ಕಿಸ್—ಕಪ್ಪು ಸಮುದ್ರಕ್ಕೆ ನೇರ ಪೂರ್ವದ ಕೊನೆಯಲ್ಲಿದ್ದ ನಾಡು.

ಪೀಲಿಯಾಸ್—ಅಯೋಲ್ಕಸ್ ನಾಡ ದೊರೆ; ಹೊನ್ನ ತುಪ್ಪಟವನ್ನು ತರಲು ಜೇಸನ್ನನ್ನು ಕಳಿಸಿದವನು. ಜೇಸನ್ ಹಿಂದಿರುಗಿದಮೇಲೆ, ತಮ್ಮ ತಂದೆಯನ್ನು ತುಂಡುತುಂಡಾಗಿ ಕತ್ತರಿಸಿ ಕುದಿಸುವುದರಿಂದ ಅವನು ಮತ್ತೆ ಯೌವನವನ್ನು ಗಳಿಸಬಹುದೆಂದು ಪೀಲಿಯಾಸನ ಹೆಣ್ಣು ಮಕ್ಕಳನ್ನು ಮೀಡಿಯ ಮೋಸದಿಂದ ಒಪ್ಪಿಸಿ ಅವರಿಂದ ಹಾಗೆ ಮಾಡಿಸಿದಳು.

ಪೀಲಿಯಾನ್—ಥೆಸಲಿಯಲ್ಲಿನ ಒಂದು ಪರ್ವತ.

ಅಯೋಲ್ಕಸ್—ಥೆಸಲಿಯಲ್ಲಿನ ಒಂದು ಪಟ್ಟಣ; ಪೀಲಿಯಾಸನೂ, ಜೇಸನ್ನನೂ ಅಲ್ಲಿ ವಾಸಿಸುತ್ತಿದ್ದರು.

ಕಾರಿಂಥ್—ಭೂಶಿರದ ಮೇಲಿನ ಒಂದು ನಗರ; ಇದು ಸೂಳೆಯರಿಗೆ ಹೆಸರುವಾಸಿಯಾಗಿತ್ತು.

ಥೇಮಿಸ್—ಕಾನೂನು ಕಟ್ಟಳೆ ಮತ್ತು ನ್ಯಾಯಗಳ ಸ್ವರೂಪವಾಗಿದ್ದ ದೇವಿ.

ಸ್ಯೂಸ್—ಪ್ರಾಚೀನ ಗ್ರೀಕರ ಪ್ರಧಾನ ದೇವ; ಸ್ವರ್ಗಾಧಿಪತಿ.

ಹೆಕಟಿ—ಕನಸುಗಳನ್ನೂ ಹುಚ್ಚನ್ನೂ ಅನೀರಿಕ್ಷಿತ ಭಯವನ್ನೂ ಉಂಟುಮಾಡುವ ಒಂದು ಪ್ರಬಲ ಅಸ್ಪಷ್ಟ ಶಕ್ತಿ.

ಸೈಪ್ರಿಸ್—ಅಫ್ರೊಡೈಟ್. ಗ್ರೀಕರ ಪ್ರೇಮದೇವಿ.

ಆರ್ಫ್ಯೂಸ್—ದಂತ ಕಥೆಗಳಲ್ಲಿ ಬರುವ ಮತ್ತು ಮಹಾಕವಿಯೆಂದು ಪರಿಗಣಿತವಾದ ಒಬ್ಬ ವ್ಯಕ್ತಿ.

ಫೀಬಸ್—ಅಪಾಲೊ, ರುದ್ರನಾಟಕಗಳಲ್ಲಿ ಬರುವ ವೈದ್ಯದ, ಭವಿಷ್ಯವಾಣಿಯ ಮತ್ತು ಗಾನದ ಅಧಿದೇವತೆ.

ಪಲ್ಲಾಸ್—ಅಥೀನೆ. ಸ್ಯೂಸಿನ ಮಗಳು ಮತ್ತು ಅಥೆನ್ಸಿನ ವಿಶೇಷ ಸಂರಕ್ಷಕಿ.

ಎರಕ್ಥಿಯುಸ್—ಗ್ರೀಕರ ಪುರಾಣದಲ್ಲಿ ಬರುವ ಅಥೆನ್ಸಿನ ರಾಜ.

ಸೆಫಿಸೊಸ್—ಅಟ್ಟಿಕ ಪ್ರಾಂತದ ಒಂದು ಹೊಳೆ.

ಹೀಲಿಯೋಸ್—ಸೂರ್ಯದೇವ.

ಸ್ಕಿಲ್ಲ—ಇಟಲಿ ಮತ್ತು ಸಿಸಿಲಿಗಳ ನಡುವಣ ಜಲಸಂಧಿಯ ಇಟಲಿಯ ಭಾಗದಲ್ಲಿನ ಗುಹೆಯೊಂದರಲ್ಲಿ ನೆಲಸಿದ್ದ ಒಬ್ಬಳು ಕಡಲ ರಕ್ಕಸಿ.

ಐನೋ—ಕಾಡ್ಮಸ್ಸಿನ ಮಗಳು. ಥೀಬ್ಸಿನ ರಾಜ ಅಥಮಸ್ಸಿನ ಎರಡನೆಯ ಹೆಂಡತಿ.

ಹೀರಾ—ಸ್ಯೂಸಿನ ತಂಗಿ ಮತ್ತು ಹೆಂಡತಿ.